# ಪ್ರಕಾಶಕರ ಎರಡುಮಾತುಗಳು.

ಕಳ್ಳನಿಗೆ ಕಾಣಿಕೆ ಎಂಬ ಹೆಸರನ್ನೋದಿ ಎಷ್ಟೋ ಜನರು ಹಲವು ಬಗೆಯ ತರ್ಕ-ವಿತರ್ಕಗಳನ್ನು ಮಾಡಬಹುದು; ಆದರೆ ಇದನ್ನು ಸಂಪೂರ್ಣವಾಗಿ ಓದಿದ ಹೊರತು ಅವರ ಸಮಾಧಾನವಾಗಲಾರದು. ಈ ಕಾದಂಬರಿಯಲ್ಲಿ ವರ್ಣಿಸಲ್ಪಟ್ಟ ವ್ಯಕ್ತಿಯು ಅಸಾಮಾನ್ಯವಾದದ್ದು. ಈ ವ್ಯಕ್ತಿಯು ಕಳ್ಳನ ವೇಷ ತಾಳಿ ಹಲವು ಜನ ಡಿಟೆಕ್ಟಿವ್ಹರ ಸಾಮರ್ಥ್ಯವನ್ನು ಪರೀಕ್ಷಿಸಿತು.

ಗುಪ್ತ ಪೋಲೀಸರ ಕೆಲಸಕ್ಕೆ ಚಾತುರ್ಯವು ಹೆಚ್ಚಾಗಿ ಬೇಕಾಗುತ್ತದೆ. ಅಂಥ ಚಾಣಾಕ್ಷನೇ ಆ ಖಾತೆಯಲ್ಲಿ ಪ್ರಗತಿ ಹೊಂದುತ್ತಾನೆ. ಪ್ರಸ್ತುತ ಕಾದಂಬರಿಯಲ್ಲಿ ಬುದ್ಧಿಶಾಲಿಯಾದ ಒಬ್ಬ ಕಳ್ಳನು ಕೂಡಲು, ಅವನಿಗಿಂತ ಕಡಿಮೆ ಚಾತುರ್ಯವುಳ್ಳ ಗುಪ್ತ ಪೋಲೀಸರು ಹೇಗೆ ಹತಾಶರಾಗುತ್ತಾರೆಂಬ ಸಂಗತಿಯ ಸಮೀಚೀನ ವರ್ಣನೆಯಿರುತ್ತದೆ.

ದಿವಂಗತ ಕುಲಕರ್ಣಿ ಇವರು ಪ್ರಸ್ತುತ ಕಾದಂಬರಿಯನ್ನು ಬಹು ಮಾರ್ಮಿಕವಾಗಿ ಬರೆದಿರುವರು. ವಿಷಯವು ಹೃದಯಂಗಮುಯವಾಗಿರುವದು. ಇದರ ಮೂರು ಆವೃತ್ತಿಗಳ ಪ್ರತಿಗಳು ಈ ಮೊದಲೇ ತೀರಿ ಹೋಗಿವೆ. ಈ ೪ ನೇ ಆವೃತ್ತಿಯನ್ನು ಪ್ರಕಟಿಸುವ ಯೋಗವು ನಮಗೆ ಲಭಿಸಿದೆ. ಈಗ ಜನತೆಯಲ್ಲಿ ಪತ್ತೇದಾರಿ ಕಾದಂಬರಿಯ ವಾಚನದ ರುಚಿಯೂ ಹೆಚ್ಚಿರುವದರಿಂದ ಈ ಕಾದಂಬರಿಯು ಅಂಥ ವಾಚಕರ ಅಭಿರುಚಿಯನ್ನು ಮತ್ತಿಷ್ಟು ಹೆಚ್ಚಿಸಲಿಕ್ಕೆ ಸಹಾಯ ಮಾಡುವದೆಂದು ಹೇಳಬಹುದು.

ಧಾರವಾಡ

—ಪ್ರಕಾಶಕ

೧—೧—೧೯೫೨.

# ಕಳ್ಳನಿಗೆ ಕಾಣಿಕೆ

## ಗುಪ್ತಪೋಲೀಸರ ಗಂಡ.

ಸರ್ದಾರಸಿಂಗನು ಖುದಾಬಾದ ಸಂಸ್ಥಾನದ ಗುಪ್ತ ಪೋಲೀಸ ಖಾತೆಯ ಇನ್ಸಪೆಕ್ಟರ! ಚನ್ನಾಗಿ ಕೆಲಸ ಮಾಡುವ ಜಾಣ ಮನುಷ್ಯ ನೆಂದು ಆತನ ಪ್ರಸಿದ್ಧಿಯಿತ್ತು. ಕಾರಣ ಅಲ್ಲಿಯ ಸಂಸ್ಥಾನಿಕನಾದರೂ ಆತನನ್ನು ಆದರಿಸುತ್ತಿದ್ದುದು ಆಶ್ಚರ್ಯವಲ್ಲ. ಈ ಸದ್ಗುಣಗಳಂತೆ ಅವ ನಲ್ಲಿ ಕೆಲವು ದೋಷಗಳೂ ಇದ್ದವು. ತಾನು ತನ್ನ ಕೆಲಸದಲ್ಲಿ ಎಂದೂ ತಪ್ಪು ಮಾಡುವದಿಲ್ಲೆಂದು ಆತನ ದೃಢವಾದ ನಂಬಿಗೆಯಿತ್ತು. ಯಾರಾ ದರೂ ತನ್ನ ತಪ್ಪು ತೋರಿಸಿಕೊಟ್ಟರೆ, ಆವನು ಅವರ ಮೈ ಮೇಲೆ ಈದ ಹುಲಿಯಂತೆ ಏರಿ ಹೋಗುವನು. ತನ್ನ ಕೈಕೆಳಗಿನ ನೌಕರ ಜನರು ಎಷ್ಟು ಚನ್ನಾಗಿ ಕೆಲಸ ಮಾಡಿ ತೋರಿಸಿದರೂ, ಅವನು ಅವ ರನ್ನು ಗೌರವಿಸುತ್ತಿರಲಿಲ್ಲ! ಇಂಥ ದುರಭಿಮಾನಿಯಾದ ಆ ಗೃಹ ಸ್ಥನು, ಪ್ರಸಂಗವಿಶೇಷದಲ್ಲಿ ಬೇರೆಯವರ ಅಭಿಪ್ರಾಯವನ್ನು ಕೇಳಿಕೊಳ್ಳುವ ದೆಂದರೆ, ತನ್ನ ಅವಮಾನವೇ ಆಯಿತೆಂದು ತಿಳಿಯುತ್ತಿದ್ದರೆ ಆಶ್ಚರ್ಯ ವಲ್ಲ.

ಹೀಗಿರಲು ಒಮ್ಮೆ ಅವನ ಅಭಿಮಾನವೆಲ್ಲ ನಾಶವಾಗಿ, ಆತನು ಎರಡನೆಯವರ ಅಭಿಪ್ರಾಯವನ್ನು ಕೇಳಿಕೊಳ್ಳುವ ಪ್ರಸಂಗ ಬಂತು. ಒಂದು ದಿನ ಸರದಾರಸಿಂಗನು ತನಗಾದ ಭಯಂಕರ ಅಪಮಾನವನ್ನು ಪರಿಹರಿಸಿ ಕೊಳ್ಳಲು ಏನು ಉಪಾಯ ಮಾಡಬೇಕು? ಯಾರನ್ನು ವಿಚಾರಿಸಬೇಕು? ಎಂದು ಆಲೋಚಿಸಿ, ತನ್ನ ಉಡುಪು ಧರಿಸಿಕೊಂಡು, ಮುಂಬಯಿಯ ಆಗಿನ ಪ್ರಸಿದ್ಧ ಡಿಟೆಕ್ಟಿವ್ಹರಾದ ಬಾಬೂರಾವ ಎಂಬವರ ಕಡೆಗೆ ಭರದಿಂದ ಸಾಗಿದನು. ಬಾಬೂರಾಯನು ಒಂದು ಖೂನಿಪ್ರಕರಣದ ಚೌಕಶಿಮಾಡಿ ಬೇಸತ್ತು ಅದೇ ಮನೆಗೆ ಬಂದು, ಆರಾಮಿ ಖುರ್ಚಿಯ ಮೇಲೆ ಸಿಗ ರೇಟು ಸೇದುತ್ತ ಅಡ್ಡಾಗಿದ್ದನು. ತನಗೆ ಬಹಳ ಬೇಸರ ಬಂದಿದ್ದರಿಂದ

ಯಾರೂ ಬಂದರೂ ಒಳಗೆ ಬಿಡಕೂಡದೆಂದು ಬಾಗಿಲ ಕಾಯುವ ಸಿಪಾಯಿಗೆ ಅಪ್ಪಣೆ ಮಾಡಿದ್ದನು. ಅಪ್ಪಣೆಯ ಮೇರೆಗೆ ಅವನು ಬಾಗಿಲ ಕಾಯುತ್ತಿರಲು, ಅಡಿಗೆಯವಳು ಕೆಲವು ಸಾಮಾನು ತರುವದಕ್ಕಾಗಿ ಆ ಸಿಪಾಯಿಯನ್ನು ಪೇಟೆಗೆ ಕಳುಹಿ, ಅವನ ಸ್ಥಳದಲ್ಲಿ ತಾನು ಕೂಳಿತುಕೊಂಡಳು. ಈ ಸಂಧಿಯಲ್ಲಿಯೇ ಸರದಾರಸಿಂಗನು ಬರಲು ಬಾಬೂರಾಯನ ಮಿತ್ರನೆಂದು ಆ ದಾಸಿಯು ಅವನನ್ನು ಒಳಗೆ ಬಿಟ್ಟುಬಿಟ್ಟಳು.

ಯಾರನ್ನೂ ಒಳಗೆಬಿಡಬಾರದೆಂದು ಬಾಗಿಲಲ್ಲಿಯ ಸಿಪಾಯಿಗೆ ತಿಳಿಸಿ ಬಂದಿರಲು, ಈಗ ಅಟ್ಟದ ಪಾವಟಿಗೆಗಳನ್ನು ಖಡ್‌ಖಡ್ ಎಂದು ಸಪ್ಪಳ ಮಾಡುತ್ತ ಏರಿ ಬರುವವರು ಯಾರು ನೋಡು ! ಎಂದು ಬಾಬೂರಾಯನು ಸಮೀಪದಲ್ಲಿ ಕುಳಿತಿದ್ದ ಭೋಟೂಸಿಂಗನಿಗೆ ತಿಳಿಸಲು, ಅವನು ನೋಡುವದಕ್ಕಾಗಿ ಹೊರಟನು. ಈ ಭೋಟೂಸಿಂಗನು ಬಾಬೂರಾಯನ ವಿಶ್ವಾಸಿಕ ನೌಕರನು; ಅವನು ಸರ್ವದಾ ಒಡೆಯನ ಬಳಿಯಲ್ಲಿಯೇ ಇರುತ್ತಿದ್ದನು. ಮೇಲೇರಿ ಬರತಕ್ಕವನು ಬಾಬೂರಾಯರ ಪರಿಚಯದವನಾದ ಖುದಾಬಾದದ ಇನಸ್ಪೆಕ್ಟರ ಸರದಾರಸಿಂಗನೇಂಬದನ್ನು ತಿಳಿದು, ಭೋಟೂಸಿಂಗನು ಸುಮ್ಮನೆ ಮೇಲೇರಿ ಬಂದು, ಅದರಂತೆ ಒಡೆಯನಿಗೆ ತಿಳಿಸಿದನು. ಆಗ ಬಾಬೂರಾಯನು:- ಈತನು ಮಾತ್ರ ಬಹಳ ಗರ್ವಿಷ್ಠ ಸ್ವಭಾವದವನಿದ್ದು. ಇವನಿಗೆ ಒಂದು ಸಾರೆ ಮುಂಬೈ ಡಿಟೆಕ್ಟಿವ್ಹರ ಕೈ ತೋರಿಸಬೇಕು. ಬರಲಿ ! ಎಂದು ಅನ್ನುವಷ್ಟರಲ್ಲಿ ಸರದಾರಸಿಂಗನ ಸವಾರಿಯು ಮೇಲೇಯೇ ಬಂದಿತು. ಬಾಬೂರಾಯನು ಅಭ್ಯುತ್ಥಾನ ಮಾಡಿ, ಸೇಕಹ್ಯಾಂಡ್ ಮೊದಲಾದ ಹೊಸಪದ್ಧತಿಯ ಸ್ವಾಗತಪೂರ್ವಕ ಅವನನ್ನು ಹತ್ತರ ಕುಳ್ಳಿರಿಸಿಕೊಂಡನು. ಬಾಬೂರಾಯನು ಸರದಾರಸಿಂಗನ ಮುಖವನ್ನು ನೋಡಿ, ಇವನು ಭೆಟ್ಟಿಗೆ ಸಹಜವಾಗಿ ಬಂದಿರವೆ, ಏನೋ ಮಹತ್ವದ ಕೆಲಸಕ್ಕಾಗಿ ಬಂದಂತೆ ಕಾಣುತ್ತದೆ, ಎಂದು ಮನವಲ್ಲಿ ಆಲೋಚಿಸುತ್ತಿರಲು, ಸರದಾರಸಿಂಗನು ತನ್ನ ತಲೆಯ ಮೇಲಿನ ಪೇಟಾ ತೆಗೆದಿಟ್ಟು, ಇನ್ನು ಏನೋ ಮಾತಾಡಬೇಕೆನ್ನುತ್ತಿರಲು, ಭೋಟೂ, ಸರದಾರ ಸಾಹೇಬರಿಗೆ ಚಹಾ ತಂದು ಕೊಡು. ಇವರು ಸ್ವಲ್ಪ ವಿಶ್ರಾಂತಿ ತಕ್ಕೊಂಡ ಬಳಿಕ ಮಾತಾಡೋಣವಂತೆ, ಎಂದು ಬಾಬೂರಾಯನೆನ್ನಲು, ನಾನು ಎದುರಿಗಿರುವ ಚಹಾದ

ಹೋಟಲಿನಲ್ಲಿ ಇದೇ ಈಗ ಚಹಾ ತಕ್ಕೊಂಡು ಬಂದಿರುತ್ತೇನೆ; ಕಾರಣ ಈಗ ಬೇಡ, ಎಂದು ಸರದಾರಸಿಂಗನು ಹೇಳಿದನು. ಘೋಟೋನೂ ಒಡೆಯನ ಮೋರೆಯನ್ನು ನೋಡುತ್ತ ಸುಮ್ಮನೆ ಕುಳಿತನು.

ಸರದಾರಸಿಂಗ:—ಬಾಬೂರಾವ, ಒಂದು ಮಹತ್ವದ ಪ್ರಕರಣದಲ್ಲಿ ನಿಮ್ಮ ಅಭಿಪ್ರಾಯವನ್ನು ಕೇಳಿಕೊಳ್ಳುವದಕ್ಕಾಗಿ ಬಂದಿರುವೆನು. ಇಂದಿನ ವರೆಗೂ ಅನುಭವಕ್ಕೆ ಬಾರದೆ ಇದ್ದಂಥ ಒಂದು ಬಿಕ್ಕಟ್ಟಿನ ಪ್ರಸಂಗವು ಬಂದಿದೆ. ಏನಂದರೆ, ಮಹಾಚಾಣಾಕ್ಷನಾದ ಒಬ್ಬ ದರವಡೆಖೋರನು ನನ್ನನ್ನು ಹುಚ್ಚನನ್ನಾಗಿ ಮಾಡಿ ಕೂರಿಸಿರುವನು. ನಾನು ಇಂದಿನ ವರೆಗೆ ಶೋಧಿಸಿದ ಜಾಣತನವೆಲ್ಲ ಈಗ ಸುಳ್ಳಾಗಿದೆ. ನನ್ನ ಕೈಕೆಳಗಿನ ನಾಕ ರರು ನನಗೆ ಹಾಸ್ಯ ಮಾಡುವ ಪ್ರಸಂಗ ಬಂದಿದೆ. ಹೆಚ್ಚಿಗೆ ಏನು ಹೇಳಲಿ! ಹೆಸರಿಗೆ ತಕ್ಕಂತೆ, ಅವನು ಬಹಾದ್ದುರನೇ ಆಗಿರುವನು. ಈ ಪ್ರಸಂಗದಲ್ಲಿ ನಾನು ಏನು ಮಾಡಬೇಕು?

ಬಹಾದ್ದರ ಎಂಬ ಹೆಸರೇ? ಚನ್ನಾಗಿ ವಿಚಾರ ಮಾಡಿರುವಿರೋ? ಎಂದು ಬಾಬೂರಾಯನು ನಗುತ್ತ ಕೇಳಿದನು.

ಏನು ಹೇಳಲಿ ಬಾಬೂರಾವ! ಇದು ಹುಡುಗಾಟಿಕೆಯ ಮಾತಲ್ಲ! ನಾನು ಇದು ವರೆಗೆ ಎಷ್ಟೋ ಬಗೆಯ ಕಳ್ಳರನ್ನು ನೋಡಿರು ವೆನು. ಕಿಸೆ ಕತ್ತರಿಸುವವರು, ಸ್ತ್ರೀಯರ ಮೂಗಿನೊಳಗಿನ ನತ್ತು ಕತ್ತ ರಿಸುವವರು ಮೊದಲಾದ ಎಷ್ಟೋ ಜನ ತುಡುಗರನ್ನು ಹಿಡಿದು ತುರಂಗಕ್ಕೆ ಕಾಣಿಸಿರುವೆನು; ಆದರೆ ಈ ಬಹಾದ್ದರನಂಥ ಮಹಾಧೂರ್ತ ಕಳ್ಳನನ್ನು ಮಾತ್ರ ನಾನು ಇಂದಿನ ವರೆಗೂ ಕಂಡಿಲ್ಲ. ಈತನು ಭಯಂಕರ ಮನುಷ್ಯ! ಎಂದು ನುಡಿದ ಸರದಾರಸಿಂಗನ ಮಾತಿಗೆ:— ಬಹಾದ್ದರ ಎಂಬ ಹೆಸ ರನ್ನು ನಾನು ಎಲ್ಲಿಯೋ ಕೇಳಿದಂತೆ ಲಕ್ಷ್ಯದಲ್ಲಿದೆ; ಆದರೆ ನಿಮ್ಮ ಈ ಬಹಾ ದ್ದರನು ಆತನೇ ಇರಬಹುದೇನು? ಎಂದು ಸಿಗರೇಟಿನ ಹೊಗೆಯನ್ನು ಮೇಲಕ್ಕೆ ಬಿಡುತ್ತ:—ಅವನ ಬಗ್ಗೆ ಇನ್ನೂ ಹೆಚ್ಚಿಗೆ ಗೊತ್ತಿದ್ದರೆ ಹೇಳ ಬೇಕು, ಎಂದು ಬಾಬೂರಾಯನು ನುಡಿದನು. ಆಗ ಸರದಾರಸಿಂಗನು:— ಆತನ ಪರಿಚಯ ಹೇಗಾಯಿತೆಂಬದನ್ನು ತಿಳಿಸುವದಕ್ಕೆಂದೇ ಈಗ ನಾನು ಇಲ್ಲಿಗೆ ಬಂದಿರುತ್ತೇನೆ. ಮೂರು ವಾರಗಳ ಹಿಂದೆ ಈ ಭಯಂಕರ ಚೋರನ

ಪೆ. ಪಲನೇ ಪತ್ರ ನನಗೆ ತಲುಪಿತು, ಎಂದು ಅನ್ನುತ್ತ, ಅಷ್ಟಕಿಷ್ಟಾದ ಅಕ್ಷರಗಳಿಂದ ಒಂದು ಹೊಲಸು ಕಾಗದದ ಮೇಲೆ ಬರೆಯಲ್ಪಟ್ಟ ಪತ್ರವೊಂದನ್ನು ಬಾಬೂರಾಯನ ಮುಂದೆ ಚಲ್ಲಲು, ಆತನು ಅದನ್ನು ತೆಗೆದುಕೊಂಡು ಓದತೊಡಗಿದನು. ಅದರಲ್ಲಿ ಹೀಗೆ ಬರೆದಿತ್ತು:—

ಮಹಾರಾಜ, ತಮಗೆ ಸದ್ಯಕ್ಕೆ ವಿಶೇಷ ಕೆಲಸವೇನೂ ಇದ್ದಂತೆ ತೋರುವದಿಲ್ಲ. ಸಂಸ್ಥಾನದಿಂದ ಪ್ರತಿ ತಿಂಗಳೂ ನೂರು ಗಟ್ಟಿ ರೂಪಾಯಿಗಳನ್ನು ಕಿಸೆಯಲ್ಲಿ ಹಾಕಿಕೊಂಡು ಚಕ್ಕಂದದಿಂದ ಕಾಲಕಳೆಯುವದರಿಂದ ನಿಮ್ಮಲ್ಲಿ ಆಲಸ್ಯವು ತಲೆದೋರಹತ್ತಿದೆ. ಇದರಿಂದ ನಿಮ್ಮ ಪ್ರಕೃತಿಯೂ ಕೆಟ್ಟು, ಒಬ್ಬ ಕರ್ತವ್ಯದಕ್ಷ ಮನುಷ್ಯನು ಇಲ್ಲದಂತಾಗುವ ಸಂಭವವಿದೆ. ಕಾರಣ ಈ ಪ್ರಸಂಗದಲ್ಲಿ ನಿಮ್ಮ ಯೋಗ್ಯತೆಗೆ ತಕ್ಕ ಒಂದು ಉದ್ಯೋಗವನ್ನು ನಿಮಗೆ ಹಚ್ಚುವ ಸಾಹಸ ಮಾಡಿರುವೆನು.

ನಿಮ್ಮ ಸಂಸ್ಥಾನದ ಪಟ್ಟಣಶೆಟ್ಟಿಯಾದ ಅಘಝುಲ್ಲಭಾಯಿ ಎಂಬವನು ತನ್ನ ಹೆಂಡತಿಯ ಸಲುವಾಗಿ ಮೊನ್ನೆ ಖರೀದಿಮಾಡಿರುವ ಮನೋಹರವಾದ ಮುತ್ತಿನ ಹಾರವನ್ನು ಸರಕಾರದ ತಿಜೋರಿಯಲ್ಲಿಟ್ಟು ಅದರ ರಕ್ಷಣೆಯ ಖರ್ಚನ್ನು ಕೊಡಲು ಒಪ್ಪಿ, ನಾಲ್ಕು ಸಾವಿರ ಪೌಂಡುಗಳನ್ನು ಈಗಲೇ ಕೊಟ್ಟಿರುವನಷ್ಟೇ? ಆ ಮುತ್ತಿನ ಹಾರವನ್ನೂ, ಅದರ ಸಂರಕ್ಷಣೆಯ ಹಣವನ್ನೂ ಇನ್ನು ೧೫ ದಿವಸಗಳೊಳಗಾಗಿ ನನ್ನ ಸ್ವಾಧೀನ ಪಡಿಸಿಕೊಳ್ಳುವೆನು; ಹಾಗು ಮಣಿಲಾಲ ಜವ್ಹೇರಿ ಎಂಬ ಸಾವುಕಾರನ ತಿಜೋರಿಯಲ್ಲಿರುವ ಬೇಬಂಡಪುರದ ಮಹಾರಾಜನ ರತ್ನಕೆಚ್ಚಿದ ಶಿರಪೇಚ ಆಭರಣದ ಮೇಲೆ ನನ್ನ ಕಣ್ಣು ಕುಳಿತಿದೆ; ಮತ್ತು ಖುದ್ದ ಸಂಸ್ಥಾನದ ಒಡೆಯರಾದ ನಿಮ್ಮ ದೊಡ್ಡ ಸಾಹೇಬರ ಕೈಯೊಳಗಿರುವ ವಜ್ರದ ಉಂಗುರವೂ ನನ್ನ ದೃಷ್ಟಿಪಥದಲ್ಲಿ ಬರದೆ ಉಳಿದಿಲ್ಲ. ಈ ಮೇಲಿನ ಎಲ್ಲ ಅಮೂಲ್ಯ ಆಭರಣಗಳನ್ನು ನನ್ನ ಅಗಾಧ ಯುಕ್ತಿ, ಚಾತುರ್ಯಗಳಿಂದ ಸ್ವಾಧೀನ ಪಡಿಸಿಕೊಳ್ಳುವೆನು. ಈ ಎಲ್ಲ ಕಾರ್ಯಗಳನ್ನು ಜರುಗಿಸುವ ಮೊದಲು ನಿಮಗೆ ತಿಳಿಸುವ ಉದ್ದೇಶವಿಷ್ಟೇ, ನಿಮಗೆ ಈ ಸಂಗತಿಯು ತಿಳಿಯದೆ ಹೋಯಿತೆಂದು ನೀವು ಆಕ್ಷೇಪಿಸಿದರೆ, ನನ್ನ ಬಹಾದ್ದರ ಎಂಬ ಹೆಸರಿಗೆ ಕುಂದು ಬಂದೀತೆಂದು ಯೋಚಿಸಿ, ಇದ್ದದ್ದನ್ನು ಮೊದಲೇ ತಿಳಿಸಿರುವೆನು. ಅದ್ದ

ರಿಂದ ನೀವು ಜಾಗ್ರತರಾಗಿ, ಮೇಲೆ ಕಾಣಿಸಿದ ಎಲ್ಲ ಆಭರಣಗಳನ್ನು ಸಂರಕ್ಷಿಸಿಕೊಳ್ಳಿರಿ!

ಬಹಾದ್ದರ

ಪತ್ರ ಓದುವದಾದ ಮೇಲೆ ಬಾಬೂರಾಯನು ಇನಸ್ಪೆಕ್ಟರನ ಕಡೆಗೆ ನೋಡುತ್ತ ಯಾವನೊಬ್ಬನು ನಿಮ್ಮ ಹುಡುಗಾಟಿಕೆ ಮಾಡುವದಕ್ಕಾಗಿ ಹೀಗೆ ಬರೆದಿರಬಹುದೆಂದು ಅಭಿಪ್ರಾಯಪಟ್ಟನು. ಅದಕ್ಕೆ ಸರದಾರ ಸಿಂಗನು—ನನ್ನಂತೆ ನಿಮಗೂ ಪತ್ರ ಕಳಸಿದ್ದರೆ, ಆಗ ನೀವು ಏನು ಮಾಡುತ್ತಿದ್ದಿರಿ ಬಾಬೂರಾವ?

ಯಾವನೋ ನೀಚನು ವಿನೋದಕ್ಕಾಗಿ ಬರೆದದ್ದೆಂದೂ, ಅವರಂತೆ ಕಳವು ಮಾಡಿಕೊಂಡೊಯ್ಯಲು ಅವನಿಗೆ ಶಕ್ಯವಿಲ್ಲೆಂದೂ ನಾನು ತಿಳಿಯುತ್ತಿದ್ದೆನು, ಎಂದು ಬಾಬೂರಾಯನು ನುಡಿದನು.

ನಾನಾದರೂ ನಿಮ್ಮಂತೆಯೇ ತಿಳಿದಿದ್ದೆನು; ಆದರೆ ಒಂದರಹಿಂದೊಂದರಂತೆ ಕಳವುಗಳಾಗುತ್ತ, ಕಡೆಗೆ ನಮ್ಮ ದೊಡ್ಡ ಸಾಹೇಬರ ಕೈಯೊಳಗಿನ ವಜ್ರದುಂಗುರವೂ ಮಾಯವಾಯಿತು ! ಇಷ್ಟೇ ಅಲ್ಲ; ಪ್ರತಿಯೊಂದು ಕಳವಿನ ಮರುದಿನ ನನಗೊಂದು ಪತ್ರ ಬರುತ್ತಲೇ ಇದೆ. ಇಕೋ ನೋಡಿರಿ, ಆ ಪತ್ರಗಳನ್ನೆಲ್ಲ ! ಎಂದು ಸರದಾರಸಿಂಗನು ಮತ್ತೆ ಮೊದಲಿನಂತೆ ಹೊಲಸು ಕಾಗದದ ಮೇಲೆ ಬರೆಯಲ್ಪಟ್ಟ ನಾಲ್ಕು ಪತ್ರಗಳನ್ನು ಬಾಬೂರಾಯನ ಮುಂದಿರುವ ಮೇಜಿನ ಮೇಲೆ ಒಗೆದನು. ಉತ್ಸುಕನಾದ ಬಾಬೂರಾಯನು ಆ ಪತ್ರಗಳನ್ನು ಕೈಯಲ್ಲಿ ತಕ್ಕೊಂಡು ಒಂದೊಂದಾಗಿ ಓದತೊಡಗಿದನು :—

೧ನೆಯ ಪತ್ರ— ಅಫಝುಲಭಾಯಿಯ ಎಂಬತ್ತು ಸಾವಿರ ರೂಪಾಯಿ ಬೆಲೆ ಬಾಳುವ ಮುತ್ತಿನ ಹಾರವು ನಿನ್ನೆ ರಾತ್ರಿ ಕಳವಾದದ್ದು ಈ ಮೊದಲೇ ತಮಗೆ ತಿಳಿದಿರಬಹುದು !

ಬಹಾದ್ದರ

೨ನೆಯ ಪತ್ರ— ಖುದಾಬಾದ ಬ್ಯಾಂಕಿನಲ್ಲಿಟ್ಟಿದ್ದ ಅಫಝುಲ್ಲಭಾಯಿಯ ನಾಲ್ಕು ಸಾವಿರ ಪೌಂಡುಗಳು ಕಳವಾಗಿದ್ದು ಸಂಸ್ಥಾನದಲ್ಲಿ

ದೊಡ್ಡ ಗೊಂದಲವೆದ್ದಿದೆ. ಡಿಟೆಕ್ಟಿವ್ಹ ಪೋಲೀಸ ಇನಸ್ಪೆಕ್ಟರರಾದ ತಾವು ನಿದ್ರೆಯಲ್ಲಿರುವಿರೋ ?

ಬಹಾದ್ದರ

ಇನೆಯ ಪತ್ರ— ಮಣಿಲಾಲ ಜವ್ಹೇರಿಯ ತಿಜೂರಿಯೊಳಗಿನ ಶಿರ ಪೇಚ ಆಭರಣವು ನಿನ್ನೆ ರಾತ್ರಿ ನನ್ನ ಕೈಸೇರಿತು. ನಿಮ್ಮ ಬುದ್ಧಿ ಭ್ರಂಶ ವಾಯಿತೇ ಹೇಗೆ ?

ಬಹಾದ್ದರ

ಳನೆಯ ಪತ್ರ— ದೊಡ್ಡ ಸಾಹೇಬರ ಕೈಯೊಳಗಿನ ವಜ್ರದುಂಗುರವು ಕೈಯೊಳಗಿರುವಾಗಲೇ ಮಾಯವಾಯಿತು ! ನೀವು ನನ್ನ ಪ್ರತಿಸ್ಪರ್ಧಿ ಗಳಾಗಲು ತಕ್ಕವರಲ್ಲ ! ಬಕ್ಷೀಸಿನ ಆಶೆಯಿಂದ ಎಲ್ಲಾದರೂ ಇಂಥ ಕಳವುಗಳ ಪತ್ತೆಯಾಗುವದುಂಟೇ ?

ಬಹಾದ್ದರ

ಪತ್ರಗಳನ್ನೋದುವದಾದ ಬಳಿಕ ಬಾಬೂರಾಯನು ತನ್ನ ಮನದಲ್ಲಿ ಆ ಧೈರ್ಯಶಾಲೀ ಕಳ್ಳನ ಬಗ್ಗೆ ಧನ್ಯೋದ್ಗಾರಗಳನ್ನು ತೆಗೆದನು; ಹಾಗು ಆಶ್ಚರ್ಯದಿಂದ ನುಡಿದದ್ದೇನಂದರೆ— ನಾನು ಇಂದಿನ ವರೆಗೆ ಸಾವಿರಾರು ಕಳ್ಳರನ್ನು ಹಿಡಿದೆನು; ಆದರೆ ಈ ಮಾದರಿಯ ಧೈರ್ಯಶಾಲಿಯಾದ ಕಳ್ಳ ನನ್ನು ಮಾತ್ರ ಕಂಡಿರಲಿಲ್ಲ. ಸರದಾರಸಿಂಗ, ನೀವು ಈಗ ಯುಕ್ತಿಯಿಂದ ಆ ಕಳ್ಳನನ್ನು ಹಿಡಿದದ್ದಾದರೆ ನಿಮ್ಮ ಸಂಸ್ಥಾನದ ಸರಕಾರದಿಂದಷ್ಟೇ ಅಲ್ಲ, ನಮ್ಮ ಬ್ರಿಟಿಶ ಸರಕಾರದಿಂದಲೂ ನಿಮಗೆ ಬಹುಮಾನ ದೊರೆಯುವದು. ಇಂಥ ಕಪಿಲಾಷಷ್ಠಿ ಯೋಗವು ಎಲ್ಲರಿಗೂ ದೊರೆಯುವದಿಲ್ಲ.

ಸರದಾರಸಿಂಗ— ಎಲ್ಲಿಯ ಕಪಿಲಾಷಷ್ಠಿಯ ಯೋಗ ? ಎಲ್ಲಿಯ ಬಹುಮಾನ ? ಬಾಬೂರಾವ, ಈ ಪೇಚಿನೊಳಗಿಂದ ಪಾರಾದರೆ ಸಾಕಾ ಗಿದೆ. ನಾನು ಸುಮ್ಮನೆ ಕುಳಿತರೂ ಆ ಬದ್‌ಮಾಷನು ನನ್ನ ಬೆನ್ನುಹತ್ತಿ ರುವನು. ಅವನಿಂದಾದ ಅಪಮಾನವು ನನ್ನಿಂದ ಸಹಿಸಲಶಕ್ಯವಾಗಿದೆ. ಇಕೋ, ಇದು ನೋಡಿರಿ; ನಿನ್ನೆ ಸಾಯಂಕಾಲಕ್ಕೆ ಆ ಚೋರನಿಂದ ಬಂದ ಪತ್ರವು ! ಎಂದೆಂದು ಕಿಸೆಯೊಳಗಿಂದ ಮತ್ತೊಂದು ಪತ್ರವನ್ನು ತೆಗೆದು ಬಾಬೂರಾಯನ ಮುಂದೆ ಒಗೆದನು.

ಬಾಬೂರಾಯನು ಎಷ್ಟು ಬೇಸತ್ತು ಬಂದಿದ್ದರೂ, ಈ ಚಮತ್ಕಾರಿಕ ಸಂಗತಿಯನ್ನು ತಿಳಕೊಳ್ಳಲು ಮತ್ತಿಷ್ಟು ಉತ್ಸುಕನಾದನು. ಅದರಿಂದ ಸರದಾರಸಿಂಗನು ಒಗೆದ ಪತ್ರವನ್ನು ತಟ್ಟನೆ ತಕ್ಕೊಂಡು ಓದತೊಡಗಿದನು.

ಮಹರಾಜ, ನಿಮ್ಮ ಮೇಲಿನ ನನ್ನ ಪ್ರೇಮವನ್ನೆಷ್ಟೆಂದು ಹೇಳಲಿ ? ಯಾವ ಕೆಲಸ ಮಾಡಿದರೂ ನಿಮ್ಮ ಕಿವಿಯ ಮೇಲೆ ಹಾಕದೆ ಮಾಡ ಬಾರದೆನಿಸುತ್ತದೆ. ಕಾರಣ ಇನ್ನೊಂದು ಮಹತ್ವದ ಗುಪ್ತಸಂಗತಿಯನ್ನು ನಿವಗೆ ತಿಳಿಸುತ್ತೇನೆ ನಿಮ್ಮ ಸಂಸ್ಥಾನದ ಹದ್ದಿನಲ್ಲಿಯೇ ನಿಮ್ಮ ರಾಜ ಧಾನಿಯಿಂದ ೮-೧೦ ಮೈಲುಗಳ ಮೇಲೆ ಶಾಂತಿಕುಟೀರವೆಂಬ ಭವ್ಯವಾದ ಬಂಗಲೆಯಿದೆ. ಅಲ್ಲಿ ಪನ್ನಾಲಾಲನೆಂಬ ನವಕೋಟಿ ನಾರಾಯಣನು ವಾಸಿಸುವನು. ಅವನ ಅಪಾರ ಸಂಪತ್ತಿಯು ಕುಬೇರನನ್ನು ಸಹ ನಾಚಿ ಸುತ್ತಿರುವದು; ಆದರೆ ಆ ಧನಿಕನು ಪರೋಪಕಾರಕ್ಕಾಗಲಿ, ಬೇರೆ ಪುಣ್ಯ ಕಾರ್ಯಕ್ಕಾಗಲಿ ಒಂದು ಕಾಸು ಸಹ ಕೈಯೆತ್ತಿ ಕೊಡುವದಿಲ್ಲ. ಇನ್ನು ತಾನಾದರೂ ಉಪಯೋಗಿಸುತ್ತಿರುವನೆನ್ನಬೇಕೇ ? ಹೊಲ ಕಾಯುವ ಬೆದ ರಿನಂತೆ ಆತನ ಸ್ಥಿತಿಯಿದೆ. ಕಾರಣ ಅವನು ಬಹು ಬೆಲೆಯುಳ್ಳ ಮುತ್ತು ರತ್ನಾದಿಗಳನ್ನು ಹೊತ್ತ ಕತ್ತೆಗೆ ಸರಿಯಾಗಿರುವನು! ಆ ಕತ್ತೆಯ ಭಾರ ವನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆ ಮಾಡಬೇಕೆಂದು ಯೋಚಿಸಿರುವೆನು. ಅವನು ಮೊನ್ನೆ ವಿಲಾಯತಿಯಿಂದ ತರಿಸಿರುವ ಬಂಗಾರದ ಹಿಡಿಕೆಯ ವಜ್ರ ಕೆಚ್ಚಿದ ಬಹು ಮೂಲ್ಯವಾದ ಖಡ್ಗವನ್ನು ನಾನು ಎತ್ತಿಹಾಕುವೆನು. ಈ ದಿನ ರಾತ್ರಿ ಒಂಬತ್ತು ಗಂಟೆಗೆ ಸರಿಯಾಗಿ ಹೋಗಿ ಕಾರ್ಯಸಾಧಿಸಿ ಕೊಳ್ಳುವೆನು. ಆ ವೇಳೆಗೆ ನೀವೂ ತಪ್ಪದೆ ಅಲ್ಲಿಗೆ ಬರಬೇಕು. ಆ ಬಂಗ ಲೆಯು ನಿಮಗೆ ಗೊತ್ತಿರದಿದ್ದರೆ, ಚೌಕಿಯ ಪೋಲೀಸರನ್ನು ವಿಚಾರಿಸ ಬೇಕು; ಅಂದರೆ ನಿರಾಯಾಸದಿಂದ ಬಂಗಲೆಗೆ ಬರುವಿರಿ! ಈಪತ್ರ ಮುಟ್ಟಿದ ಕೂಡಲೆ ಹೊರಡುವ ಸಿದ್ಧತೆ ಮಾಡಿರಿ.

ಬಹಾದ್ದರ

ಪತ್ರ ಓದುವದಾದ ಮೇಲೆ ಅದನ್ನು ಕೆಳಗಿಟ್ಟು, ಬಾಬೂರಾಯನು— ಇದು ಮಾತ್ರ ಕೇವಲ ಚೇಷ್ಟೆ. ನನ್ನ ಆಯುಷ್ಯದಲ್ಲಿ ಒಮ್ಮೆ ಸಹ ಇಂಥ ಪ್ರಸಂಗ ಬಂದಿರುವದಿಲ್ಲ! ಕಳವು ಮಾಡುವ ವೇಳೆಯನ್ನು ಯಾವ ಕಳ್ಳ

ನಾದರೂ ಪೋಲೀಸರಿಗೆ ತಿಳಿಸುಪದುಂಟೇ? ತೀರಾ ಅಶಕ್ಯವು! ಎಂದನು.

ಸರದಾರಸಿಂಗ— ಬಾಬೂರಾವ, ಇದು ಚೇಷ್ಟೆಯಲ್ಲ! ನನ್ನ ಪಾಲಿನ ಅರಿಷ್ಟವು!! ೮ ಗಂಟೆಗೆ ೫ ಮಿನೀಟುಗಳಿರುವಾಗ ಈ ಪತ್ರವು ನನ್ನ ಕೈಸೇರಿತು. ಅದನ್ನು ಓದಿದ ಕೂಡಲೆ ನಾನು ಹೊರಡಲು ಸಿದ್ಧನಾದೆನು. ಯಾಕೆಂದರೆ ಹಿಂದೊದಗಿದ ಸಂಗತಿಗಳಿಂದ ಈದಿನ ರಾತ್ರಿ ಈ ಕಳವು ಜರಗುವದು ನಿಶ್ಚಯವೆಂದೇ ನನ್ನ ಭಾವನೆಯಾಯಿತು. ಕೂಡಲೆ ಮೋಟರಿನಲ್ಲಿ ಕುಳಿತು ಆ ಬಂಗಲೆಯ ದಾರೀ ಹಿಡಿದೆನು. ತುಸು ವೇಳೆಯಲ್ಲಿ ಬಂಗಲೆಯೂ ಬಂದಿತು. ಅದರ ಹೆಬ್ಬಾಗಿಲಲ್ಲಿ ಮೋಟರನ್ನು ನಿಲ್ಲಿಸಿ, ಗಡಿಬಿಡಿಯಿಂದ ಒಳಸೇರಿದೆನು. ತುಸು ಮುಂದಕ್ಕೆ ಹೋಗುವಷ್ಟರಲ್ಲಿ ಒಬ್ಬ ಮುದುಕನು ಗಡಿಬಿಡಿಯಿಂದ ನನ್ನ ಎದುರಿಗೇ ಬಂದನು. ಯಾರವರು? ಬೇಗನೆ ಪೋಲೀಸರನ್ನು ಕರೆತನ್ನಿರಿ. ಕಳ್ಳನು ಒಳಗೆ ಸಿಕ್ಕಿರುವನು. ತಡವಾದರೆ ಏನಾಗುವದೋ, ಎಂಬ ಭೀತಿಯುಂಟಾಗಿದೆ! ತೀವ್ರವಾಗಿ ಹೋಗಿರಿ! ಎಂದು ಒಂದೇ ಸವನೆ ಅವಸರಪಡಹತ್ತಿದನು.

ಆಗ ನಾನು—ನೀವು ಯಾರು? ಎಂದು ಆ ವೃದ್ಧನನ್ನು ವಿಚಾರಿಸಲು, ಯಾರೆಂದರೇನು? ಈ ಬಂಗಲೆಯ ಯಜಮಾನನು! ಬೇಗ ಹೋಗಿರಿ; ಸುಮ್ಮನೆ ಮಾತಿನಲ್ಲಿ ಹೊತ್ತುಗಳೆಯಬೇಡಿರಿ! ಎನ್ನಲು, ನಾನು ನನ್ನ ಪರಿಚಯವನ್ನು ಮಾಡಿಕೊಟ್ಟು, ಆ ಕಳ್ಳನಿರುವ ಜಾಗೆಯನ್ನು ತೋರಿಸಿರಿ, ಎನ್ನಲು, ಆ ವೃದ್ಧನು ಲಗುಬಗೆಯಿಂದ ನನ್ನೊಡನೆ ಬಂದವನೇ, ಒಂದು ಕೋಣೆಯ ಮುಂದೆ ನಿಂತು—ಇಕೋ, ಇದೇ ಕೋಣೆಯಲ್ಲಿ ಬಂಧಿಸಲ್ಪಟ್ಟಿರುವನು. ಈ ಕೀಲಿಯ ಕೈಯನ್ನು ತಕ್ಕೊಂಡು ಕೀಲಿ ತೆಗೆದು, ಸಾವಧಾನದಿಂದ ಒಳಗೆ ಪ್ರವೇಶಿಸಿರಿ. ಯಾಕೆಂದರೆ ಕಳ್ಳನ ಹತ್ತರ ಆಯುಧವಿರಬಹುದು! ಎಂದು ಹೇಳುತ್ತಿರುವಷ್ಟರಲ್ಲಿಯೇ ನಾನು ತಟ್ಟನೆ ಕೀಲಿಯನ್ನು ತೆಗೆದು, ಒಳಗೆ ಧುಮುಕಿದೆನು. ಈ ದಿನ ಕಳ್ಳನು ಸಿಗುವನೆಂದು ನಾನು ಉಬ್ಬಿಹೋಗಿದ್ದೆನು. ಬಾಗಿಲ ತೆರೆದವನೇ ಕಳ್ಳನ ಮೇಲೆ ಧುಮುಕಿ, ಅವನನ್ನು ಗುದ್ದಿ ನೆಲಕ್ಕೆ ಕೆಡವಿಬಿಡಬೇಕೆಂಬದು ನನ್ನ ವಿಚಾರವು. ಅದರಂತೆ ಮಾಡಲು ಒಳಗೆ ಸೇರಿ ಸುತ್ತುಮುತ್ತೆಲ್ಲ ಕಳ್ಳನನ್ನು ಶೋಧಿಸುತ್ತಿರುವಾಗ. ಹಿಂದಿನಿಂದ ಯಾರೋ ನನ್ನ ಬೆನ್ನಿಗೆ ಒಂದು ಬಲ

ವಾದ ಏಟು ಕೊಟ್ಟರು. ಅದರಿಂದ ನಾನು ಮುಗ್ಗರಿಸಿ, ಎದುರಿಗಿನ ಕಬ್ಬಿಣ ಮಂಚದ ಮೇಲೆ ಬಿದ್ದೆನು. ಆ ಪೆಟ್ಟಿನಿಂದ ನನಗೆ ಕಣ್ಣಲ್ಲಿ ಕತ್ತಲುಗವಿದಂತಾಗಿ, ಕೆಳಗೆ ಬಿದ್ದು ಮೂರ್ಛೆಹೊಂದಿದೆನು. ಮುಂದೆ ಕೆಲ ವೇಳೆಯಮೇಲೆ ಎಚ್ಚರಾಗಲು ಎದ್ದು ನೋಡುತ್ತೇನೆ; ಕೋಣೆಯ ಬಾಗಿಲು ಮುಚ್ಚಲ್ಪಟ್ಟಿದ್ದು ಅಲ್ಲಿ ಆ ಕಳ್ಳನ ಬದಲು ನಾನೇ ಸೆರೆಯಾಳಾಗಿದ್ದೆನು! ಬಾಬೂರಾವ, ಏನು ಹೇಳಲಿ, ನನ್ನ ಮಾನಹಾನಿಯ ಪರಮಾವಧಿಯನ್ನು?

ಹಾಗಾದರೆ ಆ ವೃದ್ಧನು ಆ ಮನೆಯ ಒಡೆಯನಾಗಿರಲಿಕ್ಕಿಲ್ಲ! ಎಂದು ಬಾಬೂರಾಯನು ಕೇಳಲು,

ಅವನೇ ಕಳ್ಳನು. ಆ ದಿನ ಸಾಯಂಕಾಲದಲ್ಲಿ ಆ ಬಂಗಲೆಯ ಒಡೆಯನಿಗೆ ಮುಂಬಯಿಯಲ್ಲಿ ಓದುವ ಅವನ ಪ್ರಿಯ ಪುತ್ರನಿಂದ—ನನಗೆ ಬಹಳ ಜಡ್ಡಾಗಿದೆ. ತೀವ್ರ ಹೊರಟು ಬರಬೇಕು, ಎಂಬದಾಗಿ ತಾರು ಬಂದದ್ದರಿಂದ, ಅವನು ಗಡಿಬಿಡಿಯಿಂದ ಮುಂಬಯಿಗೆ ಹೊರಟು ಹೋದನು. ಮುಂದೆ ಅವನು ಮುಂಬಯಿ ಮುಟ್ಟುವಷ್ಟರಲ್ಲಿಯೇ ನಡುದಾರಿಯಲ್ಲಿ—ಈ ಇಂದು ರಾತ್ರಿ ನಿನ್ನ ಮನೆ ಕಳವಾಗುವದು, ಎಂಬ ತಾರು ಮುಟ್ಟಿತು. ಕೂಡಲೆ ಆ ಸಾವುಕಾರನು ಹಿಂದಿರುಗಿ ಮನೆಗೆ ಬರುವಷ್ಟರಲ್ಲಿ ಕಳ್ಳನು ತನ್ನ ಕಾರ್ಯ ಸಾಧಿಸಿಕೊಂಡು, ನನ್ನನ್ನು ಸೆರೆಯಿರಿಸಿ, ಹೊರಟು ಹೋಗಿದ್ದನು. ಮುಂದೆ ಯಜಮಾನನು ಬಂದ ಬಳಿಕ ಬದಲು ನಾನೇ ಕಳ್ಳನಾಗಿ ಸಿಕ್ಕದ್ದರಿಂದ, ನನ್ನ ಅಪಮಾನಕ್ಕೆ ಎಣೆಯಿಲ್ಲದಾಯಿತು! ನಿಜವಾದ ಕಳ್ಳನು ನಿಮಗೂ ನನಗೂ ಕೂಡಿಯೇ ಮೋಸಮಾಡಿ ಪಾರಾಗಿರುವನು. ನಾನು ಕಳ್ಳನಲ್ಲ. ಪೋಲೀಸ ಅಧಿಕಾರಿಯು ಎಂದು ನಾನು ಪರಿಪರಿಯಿಂದ ಅವರಿಗೆ ನನ್ನ ಪರಿಚಯು ಮಾಡಿ ಕೊಟ್ಟು ಪಾರಾಗಿ ಬರಬೇಕಾದರೆ, ನನಗೆ ಸಾಕುಸಾಕಾಯಿತು. ಏನು ಹೇಳಲಿ ಬಾಬೂರಾವ! ಇಷ್ಟಕ್ಕೇ ಆ ಅರಿಷ್ಟವು ನನ್ನ ಬೆನ್ನು ಬಿಟ್ಟಿತೆಂದಿರೇನು? ಕೋಣೆಯಲ್ಲಿ ನನ್ನನ್ನು ಒದ್ದು ಕೆಡುವಿ, ನಾನು ಮೈ ಮರೆತು ಬಿದ್ದಾಗ, ಆ ಚತುರನಾದ ತುಡುಗ ಬಹಾದ್ದರನು ನನ್ನ ಫೋಟೊ ತಕ್ಕೊಂಡು, ಅದರದೊಂದು ಪ್ರತಿಯನ್ನು ನನ್ನ ಕಡೆಗೆ ಕಳಸಿದ್ದಲ್ಲದೆ, ನಮ್ಮ ಖಾತೆಯ ಎಲ್ಲ

ನೌಕರರಿಗೂ ಒಂದೊಂದು ಪ್ರತಿಯನ್ನು ಪುಕ್ಕಟೆಯಾಗಿ ಹಂಚಿರುತ್ತಾನೆ! ಇಕೋ ನೋಡಿರಿ, ಆ ಕಾಲದ ನನ್ನ ಫೋಟೋವನ್ನು! ಎಂದು ಸರದಾರಸಿಂಗನು ತನ್ನ ಕಿಸೆಯೊಳಗಿಂದ ಒಂದು ಫೋಟೋ ತೆಗೆದು ಬಾಬೂರಾಯನ ಕೈಯಲ್ಲಿ ಕೊಟ್ಟನು. ಆಗ ಅದನ್ನು ನೋಡಿದ ಯಾವನಿಗಾದರೂ ನಗೆ ಬರುವಂತಿತ್ತು, ಆದರೆ ಬಾಬೂರಾಯನು ಸರದಾರಸಿಂಗನ ಮನಸ್ಸನ್ನು ನೋಯಿಸಬಾರದೆಂದು ತನ್ನ ನಗೆಯನ್ನು ಆವರಿಸಿಕೊಂಡನು; ಆದರೂ ಸರದಾರಸಿಂಗನಿಗೆ ಅದು ಕೂಡ ಸಹನವಾಗದೆ—ಬಾಬೂರಾವ, ನೀವು ಮನಸಿನಲ್ಲಿಯೇ ನಗುತ್ತಿರುವಿರಲ್ಲವೆ? ನಿಮ್ಮ ಮೇಲೆಯೇ ಇಂಥ ಪ್ರಸಂಗ ಬಂದಿದ್ದರೆ ನೀವೇನು ಮಾಡುತ್ತಿದ್ದಿರಿ?

ನಗತಕ್ಕ ಪ್ರಸಂಗವಲ್ಲೆಂತಲೇ ಅದನ್ನು ಸಾವರಿಸಿಕೊಂಡು ತಡೆದಿರುವೆನು. ಈ ಫೋಟೋ ನೋಡಿದರಂತೂ ಎಂದೂ ನಗದವರಿಗೆ ಸಹ ನಗೆ ಬರುವಂತಿದೆ. ಅಷ್ಟು ಅಲ್ಪಾವಧಿಯಲ್ಲಿ ಇಷ್ಟು ಸರಸವಾಗಿ ನಿಮ್ಮ ಫೋಟೋ ತೆಗೆದದ್ದನ್ನು ನೋಡಿದರೆ, ಅವನು ಉತ್ತಮ ಫೋಟೋಗ್ರಾಫರನೂ ಇರಬಹುದಾಗಿ ಕಾಣುತ್ತದೆ. ಇಲ್ಲವಾದರೆ ಬೇರೆಯವರಿಗೆ ಈ ಕೆಲಸವು ಅಸಾಧ್ಯವೇ ಸರಿ! ಎಂದು ಬಾಬೂರಾಯನು ನುಡಿದನು. ಫೋಟೋದ ವರ್ಣನೆಯನ್ನೂ, ಚೋರನ ಶ್ಲಾಘನೆಯನ್ನೂ ಮಾಡುವದರಲ್ಲಿ ಮಗ್ನರಾಗಿ ಬಿಟ್ಟಿರಲ್ಲ! ನಾನು ಬಂದ ಕೆಲಸವೇನು ? ನನಗೇನು ಸಹಾಯಮಾಡುವಿರಿ ? ಇದರ ಕಡೆಗೆ ಲಕ್ಷ್ಯವೇ ಇದ್ದಂತೆ ಕಾಣುವದಿಲ್ಲ! ನೀವು ಮುಂಬಯಿಯ ಪ್ರಸಿದ್ಧ ಡಿಟೆಕ್ಟಿವ್ಹರು! ಅಂತೆಯೇ ನಿಮ್ಮ ಕಡೆ ಬಂದಿರುವೆನು. ನೀವು ಹೀಗೆ ಅಲಕ್ಷ್ಯಮಾಡಿದರೆ ನನ್ನ ಗತಿಯೇನು ? ಆದ್ದರಿಂದ ಈ ದೀನ ಮಿತ್ರನ ಮೇಲೆ ದಯವಿಟ್ಟು, ಆ ಚೋರನನ್ನು ಹಿಡಿಯುವ ಸಾಹಾಸ ಮಾಡಿರಿ. ಇಲ್ಲದಿದ್ದರೆ, ನನ್ನ ಮರ್ಯಾದೆಯುಳಿಯುವಂತಿಲ್ಲ, ಎಂದು ಸರದಾರಸಿಂಗನು ಬಹಳ ಆರ್ತನಾಗಿ ಮಾತಾಡಿದನು.

ಸರದಾರಸಿಂಗ, ಈಗ ನಾನು ಅಲಕ್ಷ್ಯ ಮಾಡಿರುವದಿಲ್ಲ; ಮುಂದೂ ಮಾಡುವದಿಲ್ಲ. ಒಂದು ವೇಳೆ ಹಾಗೆ ಮಾಡಿದರೆ ನಿಮ್ಮದಿಷ್ಟೇ ಏಕೆ ? ನನ್ನದೂ, ನಮ್ಮ ಖಾತೆಯದೂ ಸಹ ಮಾನ ಹೋಗುವ ಪ್ರಸಂಗ ಬರುತ್ತದೆ. ಅಂದಬಳಿಕ ನೀವೇಕೆ ಚಿಂತಿಸುವಿರಿ ? ನನ್ನ ಶಕ್ತಿ ಮೀರಿ ಹೆಣಗಿ,

ಆ ಸಾಹಸಿಯನ್ನು ಹಿಡಿಯುವೆನು, ಎಂದು ಬಾಬೂರಾಯನು ಸ್ಪಷ್ಟವಾಗಿ ತನ್ನ ಮನೋಗತವನ್ನು ತಿಳಿಸಲು, ಸರದಾರಸಿಂಗನಿಗೆ ಸ್ವಲ್ಪ ಸಮಾಧಾನವಾದಂತಾಗಿ, ಮೇಜಿನ ಮೇಲೆ ಅಸ್ತವ್ಯಸ್ತವಾಗಿ ಬಿದ್ದಿದ್ದ ತನ್ನ ಪೇಟಾ ತಕ್ಕೊಂಡು ತಲೆಗೆ ಸುತ್ತಿಕೊಳ್ಳುತ್ತ ಎದ್ದು ನಿಂತನು. ಆಗ ಬಾಬೂರಾಯನೂ ಎದ್ದು, ಅವನೊಡನೆ ತಲೆ ಬಾಗಿಲ ವರೆಗೆ ಹೋಗಿ, ಮತ್ತೆ ಧೈರ್ಯಕೊಟ್ಟು ಕಳುಹಿದನು.

ಸರದಾರಸಿಂಗನು ಮಹಡಿಯ ಪಾವಟಿಗೆಗಳನ್ನು ಇಳಿಯುತ್ತಿದ್ದನು. ಅಷ್ಟರಲ್ಲಿಯೇ ಬಾಬೂರಾಯನ ಆಫೀಸಕೋಣೆಯಲ್ಲಿರುವ ಟೇಲಿಫೋನಿನ ಘಂಟೆಯು ಝುಣಝುಣ ಎಂದು ಬಾರಿಸತೊಡಗಿತು. ಕೂಡಲೆ ಬಾಬೂರಾಯನು ಅದರ ಹತ್ತರ ಹೋಗಿ ಕೊಳವೆಯನ್ನು ಕಿವಿಯಲ್ಲಿಟ್ಟುಕೊಂಡು— ಯಾರವರು ? ಎಂದು ಪ್ರಶ್ನೆ ಮಾಡಿದನು.

ಆಗ ಟೆಲಿಫೋನದಿಂದ ಉತ್ತರದ ಪ್ರತಿಯಾಗಿ ಪ್ರಶ್ನೆ ಕೇಳಿದ್ದೇನಂದರೆ—

ತಾವೇ ಏನು, ಮುಂಬಯಿಯ ಪ್ರಸಿದ್ಧ ಡಿಟೆಕ್ಟಿವ್ಹರಾದ ಬಾಬೂರಾವ ಎಂಬವರು ?

ನಿಮ್ಮ ಹೆಸರೇನೆಂದು ಬಾಬೂರಾಯನು ಪುನಃ ಪ್ರಶ್ನೆಮಾಡಿದನು.

ಬಾಬೂರಾಯನ ಈ ಪ್ರಶ್ನೆಗೆ ಒಂದೆರಡು ಮಿನೀಟುಗಳ ವರೆಗೆ ಉತ್ತರ ಬರಲಿಲ್ಲ. ಏನೇನೋ ಅಸ್ಪಷ್ಟ ಧ್ವನಿ ಕೇಳಬರತೊಡಗಿತು. ಬಳಿಕ ಸ್ಪಷ್ಟವಾಗಿ, ಆದರೆ ಹಾಸ್ಯಯುಕ್ತ ಧ್ವನಿಯಿಂದ— ನನ್ನ ಹೆಸರು ಬಹಾದ್ದರ–ಗುಪ್ತ ಪೋಲೀಸರ ಗಂಡ ! ಎಂಬ ಉತ್ತರ ಬಂತು !

## ಕಳ್ಳನ ಕಿವಿಮಾತು.

ಎದುರಿಗೆ ಸ್ವಸ್ಥವಾಗಿ ಬಿದ್ದುಕೊಂಡಿದ್ದ, ಅತಿ ನಂಬಿಗೆಯ ಪ್ರಾಣಿಯಾದ ಟಾಯಗರ ಎಂಬ ನಾಯಿಗೆ ಅಕಸ್ಮಾತ್ತಾಗಿ ರೆಕ್ಕೆಯೊಡೆದು, ಅದು ಆಕಾಶಕ್ಕೆ ಹಕ್ಕಿಯಂತೆ ಹಾರಿಹೋಗಿದ್ದರೂ ಸಹ ಬಾಬೂರಾಯನಿಗೆ

ಒಂದು ವೇಳೆ ಆಶ್ಚರ್ಯವೆನಿಸುತ್ತಿದ್ದಿಲ್ಲ; ಆದರೆ ಬಹಾದ್ದರ–ಗುಪ್ತಪೋಲೀಸರ ಗಂಡ ಎಂಬ ಹೆಸರು ಕಿವಿಗೆ ಬಿದ್ದಾಕ್ಷಣವೇ ಆತನು ಪರಮಾಶ್ಚರ್ಯಪಟ್ಟನು. ಇಷ್ಟೇ ಅಲ್ಲ. ಕ್ಷಣಹೊತ್ತು ಸ್ತಬ್ಧನಾಗಿ ಕುಳಿತುಕೊಂಡನು. ಅವನ ಕಿವಿಯೊಳಗಿನ ನಳಿಕೆಯು ಜಾರಿ ಕೆಳಗೆ ಬಿದ್ದರೂ, ಅದು ಅವನಿಗೆ ಗೊತ್ತಾಗಲಿಲ್ಲ! ಅವನು ಮನದಲ್ಲಿ— ಸರದಾರಸಿಂಗನು ಇಷ್ಟು ಹೊತ್ತಿನವರೆಗೆ ಯಾವ ಭಯಂಕರ ಕಳ್ಳನ ಸಂಗತಿಯನ್ನು ಹೇಳುತ್ತ ಕುಳಿತಿದ್ದನೋ ಅದೇ ಕಳ್ಳನು ಟೆಲಿಫೋನದಿಂದ ಈಗ ನನ್ನಂಥ ಗುಪ್ತಪೋಲೀಸ ಅಧಿಕಾರಿಯೊಡನೆ ಸಾಹಸ ಮಾಡುತ್ತಿರುವನಲ್ಲ! ಎಂದು ಆಲೋಚಿಸುತ್ತಿರುವಾಗಲೆ ಅವನ ಬಾಯಿಂದ—ಎಂಥ ವಸ್ತಾದಿ ಕಳ್ಳನಿವನು! ಎಂಬ ಪ್ರಶಂಸೋದ್ಗಾರವು ಹೊರಟು ಹೋಯಿತು.

ಬಳಿಕ ಬಾಬೂರಾಯನು ಸಾವಧನಾಗಿ ತನ್ನ ಎರಡೂ ಕಿವಿಗಳಲ್ಲಿ ಆ ಫೋನಿನ ನಳಿಕೆಗಳನ್ನು ಮತ್ತೆ ಸೇರಿಸಿಕೊಂಡು— ಬಹಾದ್ದರ ಅಂದರೇನು? ಬಹಾದ್ದರ ಯಾರು? ಸ್ಪಷ್ಟವಾಗಿ ಮಾತಾಡಬೇಕು, ಎಂದು ಕೇಳಿದನು.

ಅದಕ್ಕೆ ಟೆಲಿಫೋನ ಮಾರ್ಗವಾಗಿ— ಇದಕ್ಕೂ ಹೆಚ್ಚಿಗೆ ತಿಳಿಸತಕ್ಕ ಸಮಯವಿದಲ್ಲ. ಈ ಮೊದಲು ನಿಮಗೆ ನನ್ನ ಪರಿಚಯವಾಗಿಲ್ಲವೇ? ಯಾಕೆ ಬಾಬೂರಾವ, ಸುಳ್ಳಾಡುವಿರೇನು? ನನ್ನ ಮಿತ್ರರಾದ ಸರದಾರಸಿಂಗರವರು ನಿಮ್ಮ ಬಳಿಯಲ್ಲಿ ಕುಳಿತದ್ದು ಯಾತಕ್ಕೆ? ನಾನು ಸತ್ಯವಾಗಿ ಹೇಳುತ್ತೇನೆ. ಅವರು ನನ್ನ ಸಂಬಂಧದ ಸಂಗತಿಯನ್ನೆಲ್ಲ ನಿಮಗೆ ತಿಳಿಸಿ, ನಿಮ್ಮ ಸಹಾಯವನ್ನು ಕೇಳಿಕೊಳ್ಳುವದಕ್ಕಾಗಿಯೇ ಬಂದಿದ್ದರಲ್ಲವೇ? ಅಂದಬಳಿಕ ಹೊಸದಾಗಿ ನನ್ನ ಗುರ್ತಿನ ಬಯಕೆಯು ನಿಮಗೇತಕ್ಕೆ?

ಬಾಬೂರಾಯನಿಗೆ ಮತ್ತಿಷ್ಟು ದಿಗಿಲು ಬಿದ್ದಿತು. ಈ ಬಹದ್ದರನೆಂಬವನು ಅಂತಜ್ಞಾನಿಯಾಗಿರಬಹುದೇನು? ಎಂದು ಸುತ್ತಲೂ ಪರೀಕ್ಷಿಸಿ ನೋಡುತ್ತ ಸುಮ್ಮನೆ ಕುಳಿತುಬಿಟ್ಟನು. ಆದರೆ ಆ ಬಹಾದ್ದರನು ಇವನನ್ನು ಸುಮ್ಮನೆ ಕೂರಗೊಡುವನೇ? ಅವನು ಮತ್ತೆ ಮಾತಾಡಲುಪಕ್ರಮಿಸಿದನು :— ಯಾಕೆ ಬಾಬೂರಾವ, ಸುಮ್ಮನೆ ಕುಳಿತಿರಲ್ಲ! ಸರದಾರಸಿಂಗ

ರವರು ತಮ್ಮ ಸಂಗತಿಯನ್ನು ಹೇಳುವಾಗ ನಿಮಗೆ ಆ ಫೋಟೋ ತೋರಿಸಿರಬಹುದಲ್ಲವೇ ? ಹ್ಯಾಗಿದೆ ಆ ಫೋಟೋ ? ಅಷ್ಟು ಅಲ್ಪಾವಕಾಶದಲ್ಲಿ, ಅಂಥ ಇಕ್ಕಟ್ಟಿನ ಸ್ಥಳದಲ್ಲಿ, ಇದಕ್ಕೂ ಚನ್ನಾಗಿ ಯಾವ ಫೋಟೋಗ್ರಾಫರನೂ ಆ ಫೋಟೋ ತೆಗೆಯಲಾರನು ! ಅದನ್ನು ನೋಡಿ ನೀವು ಬಿದ್ದು ಬಿದ್ದು ನಕ್ಕಿರಬಹುದಲ್ಲವೇ ?

ಬಹಾದ್ದರನ ಈ ಪ್ರಶ್ನೆಯನ್ನು ಕೇಳಿ, ನಿಜವಾಗಿಯೇ ಬಾಬೂರಾಯನಿಗೆ ನಗೆ ಬಂದಿತು. ಎಂಥ ವಸ್ತಾದಿಯಾದ ಕಳ್ಳನಿವನು ? ನನ್ನ ಆಯುಷ್ಯದಲ್ಲೇ ಇಂಥ ತುಡುಗನು ಗಂಟು ಬಿದ್ದಿರಲಿಲ್ಲ. ಎಂಬಿವೇ ಮೊದಲಾದ ಉದ್ಗಾರಗಳು ಬಾಬೂರಾಯನ ಬಾಯಿಂದ ಹೊರಬೀಳಹತ್ತಿದ್ದವು. ಅಷ್ಟರಲ್ಲಿ ಪುನಃ ಬಹಾದ್ದರನ ಟೆಲಿಫೋನು ಪ್ರಾರಂಭವಾಯಿತು.— ಯಾಕೆ ಬಾಬೂರಾವ, ಸುಮ್ಮನೆ ಕುಳಿತು ಏನು ವಿಚಾರಿಸುವಿರಿ ? ಇನ್ನೊಂದು ಕ್ಷಣ ಈ ಟೆಲಿಫೋನಿನ ಹತ್ತರ ನಿಲ್ಲಿರಿ. ನಿಮ್ಮ ವೇಳೆಯು ಅಮೂಲ್ಯವಾದದ್ದೇನೋ ನಿಜ; ಆದರೆ ನಾನು ನಿಮಗೆ ಇನ್ನೊಂದು ಸಂಗತಿಯನ್ನು ತಿಳಿಸುತ್ತೇನೆ. ಈ ಪ್ರಕರಣವು ನಿಮ್ಮ ಕಡೆಗೆ ಬಂದದ್ದು ಒಂದು ರೀತಿಯಿಂದ ಒಳ್ಳೇದಾಯಿತು! ತಾವು ಕಳ್ಳರನ್ನು ಹಿಡಿಯುವದರಲ್ಲಿ ಮಹಾ ನಿಪುಣರೆಂದು ಹೆಮ್ಮೆ ಪಡುವಿರಷ್ಟೇ ? ಆಯಿತು, ಆಗಲಿ ! ಇಂದಿನಿಂದ ನಮ್ಮ-ನಿಮ್ಮ ಪರೀಕ್ಷೆಯಾಗಿ ಹೋಗಲಿ ! ಆ ಸಂಸ್ಥಾನದಲ್ಲಿ ನನ್ನ ಯುಕ್ತಿಗಳನ್ನು ಬೆಳಿಸಲಿಕ್ಕೆ ಸಾಕಷ್ಟು ಸಾಧನಗಳಿರಲಿಲ್ಲ. ಈಗ ನನಗೆ ನಿಮ್ಮ ತಕ್ಕ ಜೋಡಿಯು ಸಿಕ್ಕಂತಾಯಿತು. ಇನ್ನು ನಿಮ್ಮ ಗರ್ವಹರಣ ನಾಟಕಕ್ಕೆ ಪ್ರಾರಂಭವಾಯಿತೆಂದೇ ತಿಳಿಯಿರಿ. ಇಂದೇ ಅದರ ನಾಂದೀಸ್ಥಾಪನೆಯಾದಂತಾಯಿತು! ಇನ್ನು ನೀವು ನಿಮ್ಮ ಜೊತೆಗಾರನಾದ ಸರದಾರಸಿಂಗನೊಡನೆ ಏನು ಮಾಡುವದನ್ನು ಮಾಡಿಯೇ ತೋರಿಸಿರಿ !

ಭಲೆ ! ನಿಮ್ಮ ತಾನು ಒಳ್ಳೇ ಮೇಲಕ್ಕೇರಿದಂತೆ ಕಾಣುತ್ತದಲ್ಲ ! ಎಂದು ಬಾಬೂರಾಯನು ಟೆಲಿಫೋನಿನಿಂದ ಕೇಳುವಷ್ಟರಲ್ಲಿಯೇ ಅವನಿಂದ ಹೌದು, ನನ್ನ ತಾನು ಮೇಲಕ್ಕೇ ಏರಿರುವದು; ಇಷ್ಟೇ ಅಲ್ಲ. ಇನ್ನೂ ಏರುತ್ತಲೇ ಇರುವದು. ಇದರ ಅನುಭವವು ನಿಮಗಾದರೂ ಕೂಡಲೇ ಬರುವದು, ಎಂಬ ಉತ್ತರವು ದೊರೆಯಿತು.

ಈ ಉತ್ತರವನ್ನು ಕೇಳಿ, ಬಾಬೂರಾಯನಿಗೆ ಬಹಳ ಸಿಟ್ಟು ಬಂದಿತು. ಯಾಕಂದರೆ, ಇದರಿಂದ ಅವನ ಮರ್ಯಾದೆಗೆ ಕುಂದು ಬರುವ ಪ್ರಸಂಗ ಬಂತು. ಆದಕಾರಣ ಅವನು— ನನ್ನನ್ನೇನು ಸರದಾರಸಿಂಗನೆಂದು ತಿಳಿದಿರುವಿಯೇನು ? ನನ್ನೊಡನೆ ಎಚ್ಚರಿಕೆಯಿಂದ ವರ್ತಿಸು, ಎಂದು ಟೆಲಿಫೋನದಿಂದ ಬಹಾದ್ದರನಿಗೆ ತಿಳಿಸಿದನು.

ಆಬಗ್ಗೆ ನೀವು ಯೋಚನೆಯನ್ನೇ ಮಾಡಬೇಡಿರಿ! ನನ್ನಷ್ಟು ಸಾವಧಗಿರಿಯನ್ನು ಬೇರೆ ಯಾರೂ ವಹಿಸಿರಲಿಕ್ಕಿಲ್ಲ! ಇನ್ನು ಸರದಾರಸಿಂಗರೆಂದರೇನು ಸಾಮಾನ್ಯರಲ್ಲ ! ಹೆಸರಾದ ಗುಪ್ತಪೋಲೀಸರು. ಅವರಿಗಾದರೂ ಆ ಬಗೆಯ ಅಭಿಮಾನವು ಬಹಳ. ಅದರಿಂದಲೇ ಅವರ ಸ್ಥಿತಿಯು ಹೀಗಾಯಿತು. ಒಂದೆರಡು ಪ್ರಸಂಗಗಳಲ್ಲಿಯೇ ಅವರು ಗಾಬರಿಯಾಗಿ ಮುಂದುಗಾಣದೆ ತಮ್ಮನ್ನು ಮರೆಹೊಕ್ಕಿರುವರು. ಇನ್ನು ನೀವಾದರೂ ಅವರಿಗಿಂತ ವರಿಷ್ಠ ದರ್ಜೆಯವರೆಂದು ಅಭಿಮಾನ ಪಡುತ್ತಿರಬಹುದು. ಅಂದಬಳಕ ನಿಮಗೂ ಕೆಲವು ವಿನೋದದಾಟಗಳನ್ನು ತೋರಿಸಿ, ಆನಂದದಿಂದ ಕಾಲ ಕಳೆಯಬೇಕೆಂದಿರುವೆನು. ಸುಮ್ಮನೆ ಅಭಿಮಾನಪಡುವದೇಕೆ? ಇನ್ನು ಮುಂದೆ ನಡೆಯುವ ಬುದ್ಧಿಬಲದ ಆಟದಲ್ಲಿ ನೀವು ನನ್ನನ್ನು ಎದುರಿಸಲಕ್ಕೆ ತಕ್ಕವರಿದ್ದು, ಅದಕ್ಕೆ ಸಜ್ಜಾಗಿ ಕುಳಿತುಕೊಳ್ಳಿರಿ.

ನನ್ನನ್ನು ನಿಮ್ಮ ಸರಿಕನೆಂದು ತಿಳಿಯುತ್ತಿರುವಿರವೇ ನನ್ನ ಭಾಗ್ಯ! ಎಂದು ಬಾಬೂರಾಯನು ಶಾಂತರೀತಿಯಿಂದ ಅಂದನು.

ಅದಕ್ಕೆ ಬಹಾದ್ದರನು— ಛೇ-ಛೇ. ಇಷ್ಟೊಂದು ವಿನಯವನ್ನು ತೋರಿಸುವ ಕಾರಣವಿಲ್ಲ. ತಮ್ಮ ಜಾಣತನದಿಂದ ಎಷ್ಟೋ ಜನರ ಕಲ್ಯಾಣವಾಗಿರುವದೆಂದು ನಾನು ವರ್ತಮಾನಪತ್ರಗಳಲ್ಲಿ ಓದಿರುವೆನು. ಮೊನ್ನೆ ಗಲ್ಲಿನ ಶಿಕ್ಷೆಯಾದಂಥ ಒಬ್ಬ ನಿರಪರಾಧಿ ಮನುಷ್ಯನಿಗೆ ತಮ್ಮ ಜಾಣತನದಿಂದಲೇ ಬಿಡುಗಡೆಯಾಯಿತೆಂದು ಪ್ರಸಿದ್ಧವಾಗಿರುವದು. ಹೀಗೆ ಎಷ್ಟೋ ಸಂಗತಿಗಳನ್ನು ಕೇಳಿ ತಿಳಿದಿರುವೆನು. ಆದಕಾರಣ ನೀವು ನನ್ನೊಡನೆ ಎದುರಿಸಲಿಕ್ಕೆ ಸಮರ್ಥರಾಗಬಹುದೆಂದೇ ನಿಮಗೆ ಆಮಂತ್ರಣ ಕೊಟ್ಟಿರುವೆನು. ಅದಕ್ಕೆ ನೀವೇನೂ ಹಿಂಜರಿಯಲಿಕ್ಕಿಲ್ಲ! ಒಂದುವೇಳೆ ಭಯವುಂಟಾದರೆ, ಅದರಂತೆ ಸ್ಪಷ್ಟವಾಗಿ ತಿಳಿಸಲು ಸಂಕೋಚಪಡಬೇಡಿರಿ.

ಭಯವೆಂಬುದು ನನಗೆ ಗೊತ್ತೇ ಇಲ್ಲ. ಹೀಗೆ ಕಳ್ಳರಿಗೆ ಅಂಜಬೇಕಾಗಿದ್ದರೆ, ನಾನು ಇಂಥ ಕೆಲಸವನ್ನೇ ಕೈಕೊಳ್ಳುತ್ತಿರಲಿಲ್ಲ. ನೀವು ನನ್ನೊಡನೆ ಎದುರಿಸಲಿಕ್ಕೆ ಸಿದ್ಧರಾದ್ದರಿಂದ, ತುರಂಗವಾಸಕ್ಕೇ ಸಿದ್ಧರಾದಂತಾಯಿತು. ನಿಮಗೆ ನಿಮ್ಮ ಕರ್ತವ್ಯದ ಅಭಿಮಾನವಿದ್ದುದಾದರೆ, ಹೀಗೆ ದೂರಿನಿಂದ ಭಾಷಣ ಬೆಳಿಸಿದರೆ ಏನೂ ಉಪಯೋಗವಿಲ್ಲ. ನನ್ನ ಮನೆಗೆ ಬಂದು, ನನಗೆ ಭೆಟ್ಟಿಯಾಗುವ ಸಹಾಸ ಮಾಡಿದರೇ ನಿಮ್ಮ ಬಹಾದ್ದರಿಕೆಯು! ಎಂದು ಬಾಬೂರಾಯನು ತಿಳಿಸಿದನು.

ಅದಕ್ಕೆ ಖ್ವೊ-ಖ್ವೊಕ್ಕೆಂಬ ದೊಡ್ಡ ದನಿಯಿಂದ ಹಾಸ್ಯ ಮಾಡಿದ್ದು ಟೆಲಿಫೋನಿನಲ್ಲಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಆದರೂ ಬಹಾದ್ದರನಿಂದ ಏನು ಉತ್ತರ ಬರುವದೋ ಎಂದು ಬಾಬೂರಾಯನು ಉತ್ಸುಕತೆಯಿಂದ ನಿರೀಕ್ಷಿಸುತ್ತಲೇ ಇದ್ದನು.

ತಮ್ಮ ಮಾತಿಗೆ ನಾನು ಅಂಜುವೆನೆಂದು ತಿಳಿದಿರುವಿರೇನು? ನಿಮ್ಮ ಮನೆಗೆ ಬಂದು ನಿಮಗೆ ಭೆಟ್ಟಿಯಾಗುವಷ್ಟು ನಾನು ಧೈರ್ಯಶಾಲಿಯಲ್ಲವೆಂದು ನೀವು ತಿಳಿದಿದ್ದರೆ, ನಿಮ್ಮ ಗ್ರಹಿಕೆಯು ತಪ್ಪಾದದ್ದು. ನಾನು ನಿರ್ಭೀತಿಯಿಂದ ನಿಮ್ಮ ಮನೆಗೆ ಬಂದು, ನಿಮ್ಮೊಡನೆ ಸಂಭಾಷಣ ಮಾಡಿ ಬರುವೆನು. ನೀವು ನನಗೆ ಆಮಂತ್ರಣವನ್ನು ಕೊಟ್ಟದ್ದೇ ಸೋಜಿಗವೆನಿಸಿದೆ. ಸರದಾರಸಿಂಗರವರ ಮುಖದಿಂದ ನನ್ನ ವಿಷಯದ ಮಾಹಿತಿಯನ್ನು ಕೇಳಿಕೊಂಡು, ನನ್ನ ಸಾಮರ್ಥ್ಯವನ್ನು ಚನ್ನಾಗಿ ತಿಳಿದರೂ, ನಿಮ್ಮ ತಪ್ಪು ತಿಳುವಳಿಕೆಯು ದೂರಾದಂತೆ ತೋರುವದಿಲ್ಲ.

ಭಾಪುರೇ! ನೀವು ನನ್ನ ಮನೆಗೆ ನನ್ನ ಭೆಟ್ಟಿಗೆ ಬಂದರೆ, ನಾನು ನಿಮಗೆ ಅಂಜಿ ಥರಥರನೆ ನಡುಗಬಹುದಲ್ಲವೇ? ಕೇವಲ ನಿಮ್ಮ ಆತ್ಮಸ್ತುತಿಯಿಂದೇನು ಪ್ರಯೋಜನ! ಪ್ರತ್ಯಕ್ಷ ಭೆಟ್ಟಿಯಾದಾಗ ತಿಳಿದೀತು. ಭೀತಿಯೆಂಬದು ನನಗೆ ಗೊತ್ತೇ ಇಲ್ಲ; ಹಾಗು ನಾನು ಯಾರಿಗೂ ಅಂಜುವದಿಲ್ಲ. ಹೀಗೆ ಬರೀ ಬಾಯಿಂದ ಮಾತಾಡುತ್ತೇನೆಂದು ತಿಳಿಯಬಾರದು. ಪ್ರತ್ಯಕ್ಷ ಆಚರಿಸಿ ತೋರಿಸಲಿಕ್ಕೆ ಪ್ರಸಂಗವನ್ನು ಎದುರಿಸುತ್ತಿರುವೆನು ಎಂದು ಬಾಬೂರಾಯನು ಉತ್ತರ ಕೊಟ್ಟನು.

ಒಳ್ಳೇದು! ಇನ್ನು ೩-೪ ದಿವಸಗಳಲ್ಲೆ ನಿಮಗೆ ಭೆಟ್ಟಿಯಾಗುವೆನು. ಇದಕ್ಕೂ ಪೂರ್ವದಲ್ಲಿ ನಿಮ್ಮ ಪರಿಚಯವಾಗುವ ಯೋಗವು ವ್ಯರ್ಥವಾದದ್ದಕ್ಕೆ ವ್ಯಸನವಾಗುವದು. ಸರದಾರಸಿಂಗರಿಗೆ ಕಳಿಸಿದ ಪತ್ರಗಳನ್ನೆಲ್ಲ ನಿಮಗೇ ಕಳಿಸಿದ್ದರೆ, ನಿಮ್ಮ ಪರಿಚಯವು ಸಹಜವಾಗಿ ಆಗುತ್ತಿತ್ತು. ಆಯಿತು! ಇನ್ನು ಮುಂದೆ ನಿಮ್ಮೊಡನೆಯೇ ಆಟ ಹೂಡಬೇಕಾಯಿತು, ಎಂದು ಬಹಾದ್ದರನಿಂದ ಪ್ರತ್ಯುತ್ತರ ದೊರೆಯಿತು.

ಮಿಂಚಿ ಹೋದ ಮಾತಿಗಾಗಿ ಚಿಂತಿಸಿದರೆ ಆಗುವದೇನು? ಇನ್ನಾದರೂ ನನ್ನ—ನಿಮ್ಮ ಪರಿಚಯವಾಗಲು ತೊಂದರೆಯೇಕೆ? ಅವಶ್ಯವಾಗಿ ನಡೆಯಲಿ, ನಿಮ್ಮ ಆ ಆಟವು! ಆದರೆ ನನ್ನ ಸೂಚನೆಯಿಷ್ಟೇ; ಬೆಂಕಿಯೊಡನೆ ಹುಡುಗಾಟಿಕೆಯಾಡುವ ನಿಮ್ಮ ಕೈಯು ಸುಡದೆ ಹೋಗಲಿಕ್ಕಿಲ್ಲ, ಎಂಬದಾಗಿ ಬಾಬೂರಾಯನು ತಿಳಿಸಲು, ಅದಕ್ಕೆ ಬಹಾದ್ದರನು—ನನ್ನ ಕೈಸುಡುವದೋ ಅಥವಾ ಅನರ ಝಳದಿಂದ ನಿಮ್ಮ ಮೋರೆ ಕಪ್ಪಾಗುವದೋ, ತಾನೇ ತಿಳಿಯುವದು! ಆದರೆ ತಾವು ನನಗೆ ಸಾವಧನಾಗಿರಲು ಸೂಚಿಸಿದ್ದಕ್ಕೆ ತಮ್ಮ ಉಪಕಾರ ಸ್ಮರಿಸುವೆನು. ನನ್ನ ಹಿತದ ಬಗ್ಗೆ ತಾವು ಚಿಂತೆ ಮಾಡುವ ಕಾರಣವಿಲ್ಲ. ಆತ್ಮ ರಕ್ಷಣೆಯ ಅಸಂಖ್ಯ ಉಪಾಯಗಳು ನನ್ನಲ್ಲಿವೆ. ನಿಮ್ಮಂಥ ಸಾವಿರಾರು ಮಂದಿ ಗುಪ್ತಪೋಲೀಸರು ಕೂಡಿದಾಗ್ಯೂ, ಅವರೆಲ್ಲರಿಗೂ ಮಂಕು ಬೂದಿಯನ್ನು ಹಚ್ಚಿ ಪಾರಾಗುವಷ್ಟು ಅಗಾಧ ಸಾಮರ್ಥ್ಯ ನನ್ನಲ್ಲಿದೆ. ಇದು ಸುಮ್ಮನೆ ಬಡಬಡಿಕೆಯಲ್ಲ. ನಿಮ್ಮಂಥ ಡಿಟೆಕ್ಟಿವ್ಹ ಜನರನ್ನು ಮೋಸಗೊಳಿಸುವದರಲ್ಲಿಯೇ ನನಗೆ ಆನಂದವೆನಿಸುವದು. ಅಂತೆಯೇ ಇಂಥ ಉದ್ಯೋಗವನ್ನು ಕೈಕೊಂಡಿರುವೆನು. ಕಳವು ಮಾಡಿ ದುಡ್ಡು ಗಳಿಸಬೇಕೆಂದು ನನ್ನ ಉದ್ದೇಶವಿಲ್ಲ. ಹಾಗಿದ್ದರೆ ಎಂದೋ ಲಕ್ಷಾಧೀಶನಾಗಿ ರಥ, ಕಾರುಗಳಲ್ಲಿ ಮೇರೆಯುತ್ತಿದ್ದೆನು. ನಿಮ್ಮಂತೆ ನನಗೂ ವೇಳೆಯು ಮಹತ್ವದ್ದಾಗಿರುವದು. ಯಾವದಾದರೊಂದು ಮಹತ್ವದ ಕೆಲಸದಲ್ಲಿ ಸದಾ ತೊಡಗಿಕೊಂಡಿರುವದೇ ನನ್ನ ಸ್ವಭಾವವು. ಆಗಲಿ.

ಇನ್ನು ಹೆಚ್ಚುವೇಳೆ ನಿಮ್ಮ ಈ ಆಟವು ನಡೆಯಲಿಕ್ಕಿಲ್ಲ! ಯಾಕಂದರೆ, ನನ್ನೊಡನೆ ನಿಮ್ಮ ಈರ್ಷೆ ಬೆಳೆದದ್ದರಿಂದ, ಅದು ಸ್ವಲ್ಪ ದಿನಗಳಲ್ಲೇ ವ್ಯರ್ಥವಾಗಿ ನೀವು ತುರಂಗದಲ್ಲಿ ವಾಸಮಾಡುವಿರಿ.

ಏನೂ ಚಿಂತೆಯಿಲ್ಲ. ನನ್ನ ಕಾಲೊಳಗೆ ಬೇಡಿಗಳನ್ನು ಜಡಿದು ತುರಂಗದಲ್ಲಿ ಕೊಳೆಹಾಕುವ ಪ್ರಯಾಸವು ನಿಮಗೆ ಬೇಕಾಗಿರುವದಷ್ಟೇ? ನಾಳೆ ನಿಮಗೆ ಮಹತ್ವದ ಕೆಲಸವಿದೆಯೋ? ಎಂದು ಬಹಾದ್ದರನು ವಿಚಾರಿಸಿದನು. ಮಹತ್ವದ ಕೆಲಸವಿದ್ದರೂ ಕೂಡ ಅದನ್ನು ಬದಿಗೊತ್ತಿ ನಿಮ್ಮ ಭೆಟ್ಟಿಯಾಗಬಹುದಾಗಿ ಕಾದಿರಲು ಸಿದ್ಧನಿರುವೆನು, ಎಂದು ಬಾಬೂರಾಯನು ಉತ್ತರ ಕೊಟ್ಟನು.

ನನ್ನ ಸಲುವಾಗಿ ತಮ್ಮ ಅಮೂಲ್ಯ ವೇಳೆಯನ್ನು ಕಳೆದುಕೊಳ್ಳಬೇಡಿರಿ. ಅನುಕೂಲವಿದ್ದರೆ ನಾಳೆ ಮಣಿಲಾಲ ಜವಾಹಿರ ಇವರ ಅಂಗಡಿಗೆ ಬರಬೇಕು. ಅಲ್ಲಿ ಕಣಕಣಪುರದ ಪರಲೋಕವಾಸಿ ಶಿವನಾಥದೇವರ ಸಂಗ್ರಹದೊಳಗಿನ ಅತಿ ಶ್ರೇಷ್ಠತರಗತಿಯ ಮುತ್ತು-ರತ್ನಾದಿಗಳು ಭದ್ರವಾಗಿರಿಸಲ್ಪಟ್ಟಿವೆ. ಅಂಥ ಅಮೂಲ್ಯ ವಜ್ರ-ವೈಡೂರ್ಯಾದಿಗಳು ನಮ್ಮ ಭರತಖಂಡದ ಬೇರೆ ಸಂಸ್ಥಾನಿಕರಲ್ಲಿ ಅಪರೂಪವಾಗಿಯೇ ದೊರೆಯಬಹುದು! ಅವುಗಳಲ್ಲಿ ನಾನು ಕೆಲವನ್ನು ಕದಿಯುವೆನು. ತಾವು ಅಲ್ಲಿಗೆ ಬರುವಿರೇನು? ಬರುತ್ತಿದ್ದರೆ ನಿಜವಾದ ವೇಳೆಯನ್ನು ಸಹ ತಿಳಿಸುವೆನು, ಎಂದು ಬಹಾದ್ದರನು ಹೇಳಿದನು. ಈ ಉತ್ತರದಿಂದ ಬಾಬೂರಾಯನು ವಿಚಾರಮಗ್ನನಾದನು. ಶಿವನಾಥ ರಾಜೇಸಾಹೇಬರ ಖಜಾನೆಯಲ್ಲಿ ಬಹಳ ದಿವಸಗಳಿಂದ ಸಂಗ್ರಹಿಸಲ್ಪಟ್ಟ ಹಳೇ ಪದ್ಧತಿಯ ಆಭರಣಗಳೂ, ಮುತ್ತು-ಮಾಣಿಕ್ಯಗಳೂ ಇರುವವೆಂದು ಬಾಬೂರಾಯನೂ ಕೇಳಿದ್ದನು. ಅವರ ಮರಣದ ನಂತರ ಅವರ ಹೆಂಡತಿಯಿಂದ ಇಂಥ ಸಾಮಾನುಗಳನ್ನು ಸಂರಕ್ಷಿಸುವದು ಅಸಾಧ್ಯವಾಯಿತು. ಕಾರಣ ಮುಂಬಯಿಯಲ್ಲಿರುವ ಮಣಿಲಾಲ ಜವಾಹಿರನ ಅಂಗಡಿಗೆ ಮಾರಾಟಕ್ಕೆಂದು ಅವಳು ಅವುಗಳನ್ನು ಕಳಿಸಿಕೊಟ್ಟಿದ್ದಳು. ಮಣಿಲಾಲ ಜವಾಹಿರನು ಪ್ರಾಮಾಣಿಕನಾದ ದೊಡ್ಡ ವ್ಯಾಪಾರಸ್ಥನಾಗಿದ್ದನು. ಮುಂಬೈಯೊಳಗಿನ ದೊಡ್ಡ ದೊಡ್ಡ ಶ್ರೀಮಂತರು ತಮ್ಮ ಆಸ್ತಿಯನ್ನು ಭದ್ರತೆಗಾಗಿ ಅವನಲ್ಲಿಡುತ್ತಿದ್ದರು. ಅವನ ಅಂಗಡಿಯಾದರೂ ಅಂಥ ಭದ್ರವಾದದ್ದೇ ಇತ್ತು.

ಮುಂಬೈಯೊಳಗಿನ ಫೋರ್ಟ ಎಂಬಲ್ಲಿ ಅವನ ಅಂಗಡಿಯಿದ್ದು, ಕಳ್ಳರು-ಕಾಕರು ಅದರ ಸಮೀಪಕ್ಕೆ ಸಹ ಬರುವಂತಿದ್ದಿಲ್ಲ. ಅಂಗಡಿಯ

ಸುತ್ತಲೂ ವಿದ್ಯುತ್ತಿನ ತಂತಿಗಳಿಂದ ಸುತ್ತು ಹಾಕಿದ್ದು. ನಡುವೆ ಕಲ್ಲಿನ ಭದ್ರವಾದ ಕೋಣೆಯೊಳಗೆ ಉಕ್ಕಿನ ಕಪಾಟಿಗಳಲ್ಲಿ ಶಕ್ಯವಿದ್ದಷ್ಟು ಭದ್ರವಾಗಿ ಮುತ್ತು-ಮಾಣಿಕ್ಯಗಳು ಇಡಲ್ಪಟ್ಟಿರುವವು. ಬಾಬೂರಾಯನು ಯಾವಾಗಲಾದರೂ ಕೆಲಸವಿದ್ದಾಗ ಅವನ ಅಂಗಡಿಗೆ ಹೋಗಿ ತಾಸೆರಡು ತಾಸು ಕುಳಿತು ಬರುತ್ತಿದ್ದನು. ಇಂಥ ಭದ್ರವಾದ ಇಮಾರತಿಯೊಳಗಿನ ಕಬ್ಬಿಣ ಪೆಟ್ಟಿಗೆಗಳಲ್ಲಿ ಇಡಲ್ಪಟ್ಟ ವಸ್ತುಗಳನ್ನು ಕದ್ದೊಯ್ಯುವದೆಂದರೆ, ಸಾಮಾನ್ಯ ಕೆಲಸವಲ್ಲ! ಇಂಥ ಅದ್ಭುತ ಕಳವನ್ನು ಬಹಾದ್ದರನು ಹೇಗೆ ಮಾಡುವನು? ಅಶಕ್ಯವೆಂದರೆ, ಆತನ ಹಿಂದಿನ ಪರಾಕ್ರಮದ ಪ್ರಸಂಗ ಗಳನ್ನು ನೆನಪಿಗೆ ತಂದರೆ, ಅವನು ಸಹಜವಾಗಿ ಜರುಗಿಸಬಹುದೆಂದು ಊಹಿಸಬೇಕಾಗುವದು, ಎಂದು ಆಲೋಚನೆ ಮಾಡುತ್ತಿರುವಷ್ಟರಲ್ಲಿ ಬಹಾ ದ್ದರನ ಟೆಲಿಫೋನು ಮತ್ತೆ ಪ್ರಾರಂಭವಾಯಿತು. ಯಾಕೆ ಬಾಬೂರಾವ! ಸುಮ್ಮನೆ ಆಲೋಚಿಸುವದೇಕೆ? ನಾನಂತೂ ಆಡಿದಂತೆ ಮಾಡಿ ತೋರಿ ಸುವೆನು. ನೀವು ಸಂಶಯಕ್ಕೆ ಒಳಗಾಗಿ ಬರುವದನ್ನು ಬಿಡಬೇಡಿರಿ. ಇನ್ನು ನಾನು ನಿಮ್ಮ ಅಪ್ಪಣೆ ಪಡೆಯುವೆನು; ಮತ್ತು ಮೇಲಿಂದ ಮೇಲೆ ನನ್ನ ವಿಚಾರವನ್ನು ನಿಮಗೆ ತಿಳಿಸುತ್ತಿರುವೆನು.

ಬಾಬೂರಾಯನಿಗೆ ಪರಮಾಶ್ಚರ್ಯವಾಯಿತು. ಅವನು ಟೆಲಿಫೋ ನಿನ ನಳಿಗಳನ್ನು ಕೆಳಗಿಟ್ಟು, ಕಳ್ಳನ ಈ ಕಿವಿಮಾತುಗಳನ್ನು ಯೋಚಿ ಸುತ್ತ ಕುಳಿತುಕೊಂಡನು.

## ಬಾಬೂರಾಯನ ಯೋಚನೆ.

ಏನು ವಿಚಿತ್ರ ಪ್ರಕಾರವಿದು? ಈ ಬಹಾದ್ದರನ ಕೃತಿಗಳು ಎಷ್ಟು ಕಲ್ಪನಾತೀತವಾಗಿವೆಯಲ್ಲ? ಇಂದ್ರಜಾಲ-ಮಹೇಂದ್ರಜಾಲ ಮೊದಲಾದ ವಿದ್ಯೆಗಳಿಂದ ಇಂಥ ಅದ್ಭುತ ಕೆಲಸಗಳಾಗುತ್ತವೆಂದು ಕೇಳುತ್ತಿದ್ದೆನು ಮಾತ್ರ; ಆದರೆ ಅವುಗಳಲ್ಲಿ ನನ್ನ ನಂಬಿಗೆಯಿರಲಿಲ್ಲ. ಈ ಬಹಾದ್ದರನು ಅಂಥ ವಿದ್ಯೆಯನ್ನೇನಾದರೂ ಸಾಧಿಸಿಕೊಂಡಿರಬಹುದೇನು? ಇಡಿ ಆಯುಷ್ಯ ದಲ್ಲಿ ಇಂಥ ವಿಚಿತ್ರ ಸ್ಥಿತಿಯನ್ನು ನಾನು ಕಂಡಿರಲಿಲ್ಲ! ನನ್ನ ಬುದ್ಧಿ

ಭ್ರಂಶವಾಗಿರಲಿಕ್ಕಿಲ್ಲವಷ್ಟೇ ? ಒಳ್ಳೇ ಬುದ್ಧಿಶಾಲಿಯೆನಿಸಿಕೊಂಡ ನನಗೆ, ಕಲ್ಪನೆಗಳೇ ತೋಚದಾಗಿವೆಯಲ್ಲ ! ಏನು, ನನ್ನ ಕಲ್ಪನಾಶಕ್ತಿಯೇ ಕುಂಠಿತವಾಗಿರಬಹುದೇನು ? ಎಂದು ಶೂನ್ಯ ದೃಷ್ಟಿಯಿಂದ ಮೇಲಕ್ಕೆ ನೋಡುತ್ತ ಬಾಬೂರಾಯನು ಯೋಚಿಸತೊಡಗಿದನು. ಆವನ ಅವಯವ ಗಳ ಚಲನವಲನವೆಲ್ಲ ಕಟ್ಟಾಗಿದ್ದಿತು. ಹೃದಯಸ್ಪಂದನವು ಕೂಡಾ ಮಂದ ವಾದಂತೆ ಭಾಸವಾಯಿತು. ಅವನು ಮನದಲ್ಲಿ—ಈ ಬಹಾದ್ದರನು ಏನು ಸ್ಯನೇ ಇರಬಹುದೇನು ? ಇಲ್ಲದ್ದಾದರೆ ಇವನು ಇಂಥ ಆಶ್ಚರ್ಯಕರ ಕೆಲಸಗಳನ್ನು ಯಾವ ಸಾಮರ್ಥ್ಯದಿಂದ ಮಾಡಿ ತೋರಿಸಬಹುದು ? ನಮಗೆ ಅಶಕ್ಯ ತೋರುವ ಕೃತಿಗಳನ್ನೆಲ್ಲ ಇವನು ಸಹಜವಾಗಿ ಮಾಡಿ ಬಿಡುವನಲ್ಲ ! ಯಾವ ಪೋಲೀಸ ಠಾಣೆಯ ಹೆಸರನ್ನು ಕೇಳಿದರೆ ಕಳ್ಳರು ಭಯದಿಂದ ನಡಗುವರೋ, ಯಾವ ಪೋಲೀಸ ಕಚೇರಿಯ ಮುಂದೆ ಹಾಯುವ ಧೈರ್ಯವು ಕೂಡ ಕಳ್ಳರಿಗಾಗುವದಿಲ್ಲವೋ, ಅಂಥಲ್ಲಿ ಬಹಾ ದ್ದರನ ಪ್ರವೇಶವೆ ? ಪ್ರವೇಶವಿಷ್ಟೇ ಏಕೆ ? ನನಗೆ ಕೊಟ್ಟ ಟೆಲಿಫೋನ ಫೂ ಅಲ್ಲಿಂದಲೇ ! ಅಲ್ಲಿ ಸದಾ ಕಾಯುತ್ತಿರುವ ಪೋಲೀಸರಿಗೆ ಮಂಕುಬೂದಿ ಹಚ್ಚಿ, ಟೆಲಿಫೋನ್ ರೂಮಿಗೆ ಹೋಗಿ, ಅಲ್ಲಿ ತಾನು ಒಂದು—ಒಂದೂ ವರೆ ತಾಸು ಸ್ವೇಚ್ಛೆಯಿಂದ ಮಾತಾಡುವದೆಂದರೇನು ? ಬಳಿಕ ನಿರಾತಂಕ ದಿಂದ ಹೋಗಿಬಿಡುವದೆಂದರೇನು ? ಇವನಲ್ಲಿ ಮೋಹನಾಸ್ತ್ರವೇನಾದರೂ ಇರಬಹುದೇನು ? ಎಂದು ಯೋಚಿಸುತ್ತ ಎದ್ದು ಮತ್ತೆ ಟೆಲಿಫೋನಿನ ಕಡೆಗೆ ಹೊರಳಿದನು. ಪುನಃ ವಿಚಾರವು ಬದಲಾಯಿತು. ಇನಸ್ಪೆಕ್ಟರ ಸರದಾರಸಿಂಗನಿಗೆ ಟೆಲಿಫೋನ್ ಕೊಟ್ಟು ಕರೆಯಬೇಕೆಂದು ವಿಚಾರ ಬಂದಿತು; ಆದರೆ ಸುಮ್ಮನೆ ತ್ರಾಸ ಕೊಟ್ಟಂತಾಗುವದು. ಅವನಿಗೆ ಬಹಾ ದ್ದರನ ನೆಲೆ ಹತ್ತಿದ್ದರೆ, ಅವನು ನನ್ನ ಕಡೆಗೇಕೆ ಅಳುತ್ತ ಬರುತ್ತಿದ್ದನು ? ಆ ಬಹಾದ್ದರನು ಸರದಾರಸಿಂಗನನ್ನು ಹುಚ್ಚನನ್ನಾಗಿ ಮಾಡಿರುವನಷ್ಟೇ ? ಇನ್ನು ಆ ಗ್ರಹವು ನನ್ನ ಕಡೆಗೆ ತಿರುಗಿದೆ. ಇದಕ್ಕೆ ಮುಂದೆ ವಿಚಾರ ವೇನು ? ಎಂದು ಬೀಡಿಯ ಹೊಗೆಯನ್ನು ಮೇಲಕ್ಕೆ ಬಿಡುತ್ತ ಕುಳಿತು ಕೊಂಡನು.

ಗುಪ್ತಪೋಲೀಸ ಇನಸ್ಪೆಕ್ಟರ ಬಾಬೂರಾಯನು ಒಳ್ಳೇ ಕಾರ್ಯದಕ್ಷ

ನಾದ ಮನುಷ್ಯನಾಗಿದ್ದನು. ಅವನ ಹೆಸರು ಆ ಕೆಲಸದಲ್ಲಿ ಪ್ರಸಿದ್ಧವಾಗಿತ್ತು. ಅವನು ಇನ್ನು ಸ್ವಲ್ಪ ದಿವಸಗಳಲ್ಲಿ ಸರಕಾರದಿಂದ ಬಹುಮಾನ ಹೊಂದ ತಕ್ಕವನಿದ್ದನು. ಈ ಉತ್ಕರ್ಷಕ್ಕೆ ಬಹಾದ್ದರನು ಅಡ್ಡ ಬಂದಿರುವನು. ಬಹಾದ್ದರನ ಅದ್ಭುತವಾದ ಸಾಹಸವೂ, ಆಶ್ಚರ್ಯಕರವಾದ ಸಾವಧಗಿರಿಯೂ, ಶೀಘ್ರವಾದ ಗಮನವೂ ಎಂಥವರನ್ನಾದರೂ ದಂಗುಬಡಿಸುವಂತಿದ್ದವು. ಇವನ ಸಾಮರ್ಥ್ಯವನ್ನು ಎಷ್ಟು ವರ್ಣಿಸಿದರೂ ಸ್ವಲ್ಪೇ ಆಗಿತ್ತು. ಇವನು ಇನ್ನುಳಿದ ಕಳ್ಳರಂತೆ ಕ್ಷುದ್ರನಲ್ಲ! ಇವನ ಕಳ್ಳತನ ವಸರ್ಗವೇ ಬೇರೆ ಯಾಗಿತ್ತು. ಪೋಲೀಸರನ್ನು ಎಚ್ಚರಗೊಳಿಸಿ ಕಳವು ಮಾಡುವದೇ ಅವನ ಕ್ರಮವಾಗಿತ್ತು. ಪೂರ್ವಕಾಲದಲ್ಲಿ ಗಟ್ಟಿಗರಾದ ದರವಡೆಖೋರರು ಮನೆಗೆ ಚೀಟಿಯನ್ನು ಹಚ್ಚಿ ಪ್ರಸಿದ್ಧಮಾಡಿ, ಕಳವಿಗೆ ಬಂದು ತನ್ನ ಸಾಮ ರ್ಥ್ಯವು ಹೆಚ್ಚಾದರೆ ಪಾರಾಗಿ ಹೋಗುತ್ತಿದ್ದರು, ಒಮ್ಮೊಮ್ಮೆ ಸಿಕ್ಕು ತುರಂಗ ಸಹ ಕಾಣುತ್ತಿದ್ದರು; ಆದರೆ ಇವನ ಮಾತು ಹಾಗಲ್ಲ! ಪೋಲೀಸರಿಗೆ ಮುಂದಾಗಿ ಸೂಚಿಸುವನು. ಅವರು ಎಷ್ಟು ಸಾವಧರಾಗಿದ್ದರೂ ಅವರಿಗೆ ಮೋಸ ಮಾಡಿ ಕಳವಿನ ಪದಾರ್ಥ ಸಹಿತವಾಗಿ ಪಾರಾಗಿ ಹೋಗುವನು. ಇವನು ಕಳವು ಮಾಡಿಕೊಂಡು ಹೋದನಂತರದಲ್ಲಿಯೇ ಪೋಲೀಸಿನವರ ಚೀರಾಟ-ಒದರಾಟಗಳು! ಹಿಂದಿನ ಕಾಲದ ಕಳ್ಳರಿಗೂ ಇವನಿಗೂ ಮಹ ದಂತರವಿತ್ತು. ಇವನಿಗೂ ಇನ್ನುಳಿದ ಕಳ್ಳರಿಗೂ ಹೋಲಿಸುವದೆಂದರೆ. ಶೀಘ್ರಗಾಮಿಗಳಾದ ವಿಮಾನಗಳಿಗೂ, ಒಡ್ಡರ ಬಂಡಿಗೂ ಹೋಲಿಸಿದಂತೆಯೇ ಸರಿ!

ಇನ್ನು ಶೀಘ್ರದಲ್ಲಿ ಬಹಾದ್ದರನ ಆಮಂತ್ರಣ ಬರುವದಷ್ಟೇ? ಅವನು ಲಿಲಾವಿನ ಸರ್ವ ಮಾಹಿತಿಯನ್ನೂ ತಿಳಿಸಿರುವನು. ಮಣಿಲಾಲ ಜವಾ ಹಿರನ ಅಮೂಲ್ಯ ವಸ್ತುಗಳನ್ನು ಅವನ ಕಣ್ಣ ಮುಂದೆಯೇ ಅಪಹರಿಸುವ ನಂತೆ! ಇಷ್ಟೇ ಅಲ್ಲ, ಅಲ್ಲಿ ನೆರೆದ ಯಾವತನ್ನು ಸಭ್ಯ ಗೃಹಸ್ಥರಿಗೂ, ಪಹ ರೆಗಾಗಿ ಹೋದ ಪೋಲೀಸರಿಗೂ ಏನು ಮೋಸ ಮಾಡುವನೋ ತಿಳಿಯ ದಾಗಿದೆ! ಧೈರ್ಯವಿದ್ದರೆ ಹಿಡಿಯಬನ್ನಿರೆಂತಲೇ ಅವನ ಆಹ್ವಾನ!

ಬಹಾದ್ದರನ ಆಮಂತ್ರಣದಂತೆ ಆ ಸ್ಥಳಕ್ಕೆ ಹೋಗಬೇಕೋ-ಹೋಗ ಬಾರದೋ ಎಂಬುದು ವಿಚಾರಿಸತಕ್ಕ ಮಾತೇ ಆಗಿದೆ. ಅಸಾಧ್ಯ ಕೆಲಸಕ್ಕೆ

ಕ್ರೈಹಕಿ, ಸುಮ್ಮನೆ ಜನರೊಳಗೆ ಅಪಹಾಸ್ಯಕ್ಕೆ ಗುರಿಯಾಗ ಬೇಕಾದೀತು. ನಮ್ಮೆಲ್ಲರ ಕಣ್ಣುಮುಂದೆ ಅವನು ಕಾರ್ಯಸಾಧಿಸಿ ಕೊಂಡು ಹೋದ ನೆಂದರೆ, ನಮ್ಮ ಮೂಗು ಕೊಯ್ದು, ಕೈಯಲ್ಲಿ ಕನ್ನಡಿಯನ್ನು ಕೊಟ್ಟಂತಾ ದೀತು. ಮಂದಿಗೆ ಮುಖವನ್ನು ತೋರಿಸದೆ, ವೇಷಾಂತರ ಮಾಡಿ ಹೋಗ ಬೇಕಾದೀತು. ಇಷ್ಟು ದಿನಗಳ ವರೆಗೆ ಮಂದಿಯಲ್ಲಿ ಪ್ರಸಿದ್ಧ ಡಿಟೆಕ್ಟಿವ್ಹ ನೆಂದು ಹೊಗಳಿಸಿಕೊಂಡ ನನಗೆ, ಈಗ ಈ ಬಹಾದ್ದರನ ದೆಶೆಯಿಂದ ಅಪಮಾನ ಹೊಂದುವ ಪ್ರಸಂಗ ಬಂದಿದೆ. ಇಂದಿನ ವರೆಗೆ ಎಷ್ಟೋ ದರವಡೆಖೋರ ಹಾಗು ಕಳ್ಳರಿಂದ ಜೀವವುಳಿಸಿಕೊಂಡು ಪಾರಾದದ್ದು, ಈ ಬಹಾದ್ದರಸಿಂಗ ಅಪಮಾನ ಹೊಂದುವದಕ್ಕಾಗಿಯೇ ಏನು? ಒಂದು ವೇಳೆ ನನ್ನಿಂದ ಅವನನ್ನು ಹಿಡಿಯಲಿಕ್ಕಾಗದಿದ್ದರೆ, ಇಡಿ ಆಯುಷ್ಯವನ್ನೆಲ್ಲ ಪೊಲೀಸ ಖಾತೆಯಲ್ಲಿ ಕಳೆದದ್ದರ ಫಲವೇನು? ಇನ್ನು ಅಪಮಾನಕ್ಕೆ ಹೆದರಿ ಹಿಂಜರಿದರೆ, ಕರ್ತವ್ಯಪ್ರಜ್ಞತೆಯು ಪಾಲಿಗೆ ಬರುತ್ತದೆ! ಅಂದ ಬಳಿಕ ಹೋಗುವುದನ್ನೇ ನಿಶ್ಚಯಿಸುವೆನು. ಯಶಾಪಯಶಗಳು ದೈವಾಧೀನವಾಗಿ ರುವವು. ಜೀವನಾರ್ಥ ಕಲಹದಲ್ಲಿ ಕಳ್ಳರಿಗೆ ಜಯವಾಗಹತ್ತಿದರೆ, ಕಾಲ ಚಕ್ರವು ತಿರುಗಿತೆಂದೇ ಹೇಳಬೇಕಾದೀತು. ಬ್ರಹ್ಮಸೃಷ್ಟಿಯು ನಷ್ಟವಾಗಿ, ಭೂತಸೃಷ್ಟಿಯುಂಟಾದೀತು, ಎಂಬ ವಿಷಯವೇ ಅವನ ಆಲೋಚನೆಗೆ ಮುಖ್ಯವಾಗಿತ್ತು.

ಸರದಾರಸಿಂಗನು ಹೋದ ಬಳಿಕ ಫೋಟೂನು ಬಾಬೂರಾಯನ ಕುಳಿತ ಕೋಣೆಯ ಹೊರಗೆ ನಿಂತುಕೊಂಡಿದ್ದನು. ಸರದಾರಸಿಂಗನೊಡನೆ ವಿನೋದ ಮಾಡಿದ್ದಕ್ಕೆ ಬಾಬೂರಾಯನು ಸಿಟ್ಟುಮಾಡಬಹುದೆಂದು ಅಂಜಿ ಅವನು ಅಲ್ಲಿ ನಿಂತಿದ್ದನು. ಬಾಬೂರಾಯನು ಬಹಾದ್ದರನೊಡನೆ ಟೆಲಿ ಫೋನಿನ ಸಂಭಾಷಣ ಮುಗಿಸಿ ವಿಚಾರಮಗ್ನನಾಗಿ ಕುಳಿತಾಗ, ಅವನು ಮೆಲ್ಲನೆ ಒಳಗೆ ಬಂದನು. ಅವನು ಬಂದದ್ದನ್ನು ನೋಡಿ ಬಾಬೂರಾ ಯನು—ಫೋಟೂ, ನಿನಗೆ ಬಹಾದ್ದರನ ವಿಷಯವು ತಿಳಿಯಿತೇನು? ಎಂದು ಪ್ರಶ್ನೆ ಮಾಡಲು, ಅದಕ್ಕೆ ಫೋಟೂವು—ಬಹಾದ್ದರನೆಂದರೆ ಮನು ಷ್ಯನೋ? ಪಶುಪ್ರಾಣಿಯೋ? ಎಂಬದು ಸಹ ನನಗೆ ಗೊತ್ತಿರುವದಿಲ್ಲ, ಎಂದು ಉತ್ತರ ಕೊಟ್ಟನು.

ಬಾಬೂರಾಯನು—ಬಹಾದ್ದರನೆಂಬದು ಒಬ್ಬ ವ್ಯಕ್ತಿಯ ಹೆಸರು. ಅವನು ಸಾಧಾರಣ ಮನುಷ್ಯನಾಗಿರದೆ ಅಸಾಮಾನ್ಯ ವ್ಯಕ್ತಿಯಾಗಿದ್ದನೆ. ಕಳ್ಳತನವೇ ಅವನ ಹೆಸರಾದ ಹೋರೆಯು. ನಾನು ಇಂದಿನ ವರೆಗೆ ಜಗತ್ತಿನೊಳಗಿನ ಪ್ರಸಿದ್ಧ ತುಡುಗರ ಹಲವು ಚರಿತ್ರಗಳನ್ನು ಓದಿರುವೆನು. ವರ್ತಮಾನ ಪತ್ರಗಳಲ್ಲಿ ಬಂದವುಗಳನ್ನು ಫೈಲುಮಾಡಿಟ್ಟಿರುವೆನು; ಆದರೆ ಅವುಗಳಲ್ಲಿ ಒಂದಾದರೂ ಬಹಾದ್ದರನ ಚರಿತ್ರೆಗೆ ಸರಿಹೋಲುವಂತಿಲ್ಲ ! ಆದರೂ ಇನ್ನೊಮ್ಮೆ ಶೋಧಿಸಿ ನೋಡಬೇಕು. ಛೋಟೂ, ಆ ಫೈಲು ತೆಕ್ಕೊಂಡು ಬಾ, ಎಂದ ಕೂಡಲೆ ಛೋಟೂವು ಒಂದು ಕಪಾಟು ತೆರೆದು, ಅದರಲ್ಲಿದ್ದ ಅನೇಕ ಪುಸ್ತಕಗಳ ಸಂಗ್ರಹದಲ್ಲಿ ಶೋಧಿಸಿ, ತುಡುಗರ ಚರಿತ್ರೆಯ ಫೈಲನ್ನು ಹುಡುಕಿ ತಂದು ಕೊಟ್ಟನು; ಆದರೆ ಅದರಲ್ಲಿ ಎಲ್ಲಿಯೂ ಬಹಾದ್ದರನ ವಿಷಯದ ಉಲ್ಲೇಖವಿರಲಿಲ್ಲ. ಬಹಾದ್ದರನು ಪ್ರಸಿದ್ಧ ಕಳ್ಳನಾದ್ದರಿಂದ, ಬಹು ದಿನಗಳಿಂದ ಕಳವು ಮಾಡುತ್ತ ಬಂದಿರಬಹುದು; ಆದರೆ ಈಗ ಬುದ್ಧಿಪೂರ್ವಕವಾಗಿ ಹೆಸರು ಬದಲಿಸಿರುವದರಿಂದ; ಹಿಂದೆ ಅವನ ಉಲ್ಲೇಖವಿದ್ದದ್ದು ತಿಳಿಯಲಸಾಧ್ಯವು. ಅಂದ ಬಳಿಕ ವ್ಯರ್ಥ ಶ್ರಮಬಡುವದೇಕೆ? ಅವನ ನಿಜವಾದ ಹೆಸರು ತಿಳಿಯುವ ವರೆಗೆ ಅವನ ಶೋಧವಾಗುವಂತಿಲ್ಲ. ಅವನು ಕಳವು ಮಾಡಹತ್ತಿ ಎಷ್ಟು ದಿನಗಳಾದವೋ ತಿಳಿಯದು; ಆದರೂ ಇತ್ತಿತ್ತಲಾಗಿ ಅವನು ತೋರಿಸಿದ ಯುಕ್ತಿ ಸಾಹಸಗಳು ಅವರ್ಣನೀಯವಾಗಿವೆ. ಖುದಾಬಾದ ಬ್ಯಾಂಕಿನ ಎಷ್ಟೋ ರಕಮನ್ನು ಅದ್ಭುತ ಚಾತುರ್ಯದಿಂದ ಎತ್ತಿ ಹಾಕಿದವನು. ಅವನು ನಿಜವಾಗಿಯೂ ಅಸಾಧಾರಣ ವ್ಯಕ್ತಿ ಯಾಗಿದ್ದಾನೆ, ಎಂದು ಬಡಬಡಿಸಿದನು.

ಇದನ್ನೆಲ್ಲ ಕೇಳಿ ಛೋಟೂವು ದಂಗಾಗಿ ಕುಳಿತನು. ಎಷ್ಟೋ ಹೊತ್ತಿನ ಮೇಲೆ— ಹಾಗಾದರೆ, ಈ ಎಲ್ಲ ಕಳವುಗಳನ್ನು ಬಹಾದ್ದರನೇ ಮಾಡಿರುವನೇನು ? ಎಂದು ಕೇಳಲು, ಬಾಬೂರಾಯನು ಇದಕ್ಕೆ ಎಷ್ಟೋ ಆಧಾರಗಳಿರುವವೆಂದು ಹೇಳಿ, ಸರದಾರಸಿಂಗನಿಂದ ತಿಳಿದ ಮಾಹಿತಿಯನ್ನೆಲ್ಲ ಸಂಕ್ಷೇಪವಾಗಿ ಅವನಿಗೆ ತಿಳಿಸಿದ್ದಲ್ಲದೆ, ಈ ಮೊದಲು ಟೆಲಿಫೋನಿನಿಂದ ಬಹಾದ್ದರನೊಡನೆ ನಡೆದ ಸಂಭಾಷಣವನ್ನೂ ಹೇಳಿದನು.

ಈ ಯಾವತ್ತೂ ಸಂಗತಿಗಳನ್ನು ಕೇಳಿಕೊಂಡು ಛೋಟೂವು—

ನಿಮ್ಮ ಮುಖದಿಂದಲ್ಲದೆ ಬೇರೆಯವರಿಂದ ಈ ಅತ್ಯಗಾಧವಾದ ಕಳವಿನ ಸಂಗತಿಯನ್ನು ಕೇಳಿದ್ದಾಗಿದ್ದರೆ, ನಾನು ಎಂದೂ ನಂಬುತ್ತಿರಲಿಲ್ಲ. ರಾವ ಸಾಹೇಬ, ದಯಮಾಡಿ ನನಗೆ ಆ ಸರದಾರಸಿಂಗರವರ ಫೋಟೋ ತೋರಿಸಿರಿ. ಅವರ ಗರ್ವವು ಬಹಳವಾಗಿದ್ದು, ನನ್ನನ್ನಂತೂ ಅವರು ಬಹಳವಾಗಿ ತಿರಸ್ಕರಿಸುತ್ತಿದ್ದರು. ಅವರಿಗಾದ ಈ ಅಪಮಾನದಿಂದ ನನಗೆ ತುಂಬಾ ಸಮಾಧಾನವಿದೆ.

ಹಾಗಲ್ಲ ಫೋಟೋ! ಹೊತ್ತುಬಂದಾಗ ಎಂಥವರಾದರೂ ಬಾಗಿ ನಡೆಯಬೇಕಾಗುತ್ತದೆ. ಅಂಥ ವೇಳೆಯಲ್ಲಿ ಅವರಿಗೆ ಅಳುಕುವ ಮಾತ್ಯ ಗಳನ್ನಾಡಿದರೆ, ಗಾಯದ ಮೇಲೆ ಬರೆ ಕೊಟ್ಟಷ್ಟು ವ್ಯಥೆಯಾಗುವದು. ಕಾರಣ ಯಾರಿಗೂ ನಿಷ್ಠುರ ಮಾತುಗಳನ್ನಾಡಬಾರದು. ಈಗ ಅದೇ ಬಹಾದ್ದರನು ನಮ್ಮ [illegible] [illegible]ವನು. ಅವನ ಆಮಂತ್ರಣ ದಂತೆ ಹೋದರೆ, ನಾಳಿನ ದಿನ ನಮ್ಮ ಗತಿಯು ಏನಾಗುವದೋ ತಿಳಿ ಯದು; ಆದರೂ ಹೋಗಬೇಕೆಂಬ ಉತ್ಕಂಠೆಯು ಅತಿಶಯವಾಗಿರುವದು, ಎಂದು ಬಾಬೂರಾಯನು ನುಡಿದನು.

ನೀವು ಹೊರಡುವದಾದರೆ ನನ್ನನ್ನು ಮಾತ್ರ ಬಿಟ್ಟುಹೋಗಬೇಡಿರಿ. ನನಗೆ ಬರಬೇಕೆಂಬ ಇಚ್ಛೆ ಬಹಳವಾಗಿದೆ, ಎಂದು ಫೋಟೋಸಿಂಗನು ಅನ್ನಲು, ಬಾಬೂರಾಯನು— ನೀನೂ ಅವಶ್ಯವಾಗಿ ನಡೆ. ಪೋಲೀಸರ ಸಮಕ್ಷದಲ್ಲಿ ಕಳವು ಮಾಡುವ ಅವನ ಕೈಚಲಾಕಿಯನ್ನಾದರೂ ನೋಡೋಣ. ಅವನು ನಮ್ಮೆಲ್ಲರ ಕಣ್ಣಲ್ಲಿ ಮಣ್ಣು ಹಾಕಿ, ಮುಷ್ಟೀಮಾಲು ಸಹ ಹೇಗೆ ಪಾರಾಗಿ ಹೋಗುವನೋ ನೋಡೋಣ!

---

## ಪೋಲೀಸರ ಎದುರಲ್ಲೇ ಕಳವು!

ಮರುದಿವಸ ಮುಂಜಾನೆ ಮುಖಮಾರ್ಜನಾದಿ ವಿಧಿಗಳನ್ನು ತೀರಿಸಿ ಕೊಂಡು, ಬಾಬೂರಾಯನು ತನ್ನ ಆಫೀಸ ರೂಮಿಗೆ ಬಂದು ಕುಳಿತು ಕೊಳ್ಳಲು, ಆ ದಿನದ ಟಪಾಲು ಬಂತು. ಅದರಲ್ಲಿ ಖುದಾಬಾದದ ಸರ

ದಾರಸಿಂಗರವರು ಕಳಿಸಿದ ಒಂದು ಲಕ್ಕೋಟಿ ಇತ್ತು. ಬಾಬೂರಾಯನು ಅದನ್ನೇ ಮೊದಲು ಹರಿದು ಓದಿ ನೋಡಿದನು. ಅದರಿಂದೇನೂ ಸಮಾಧಾನವೆನಿಸಲಿಲ್ಲ. ಯಾಕಂದರೆ, ಅದರಲ್ಲಿ ಬಹಾದ್ದರನು ಇದು ವರೆಗೆ ಮಾಡಿದ ವರ್ಣನೆಯಿತ್ತೇ ಹೊರ್ತು, ಅವನ ಶೋಧವನ್ನು ಹೇಗೆ ಮಾಡ ಬೇಕೆಂಬ ಪಂಚಿಕೆಯು ಸ್ವಲ್ಪಾದರೂ ಅದರಿಂದ ತಿಳಿಯುವಂತಿರಲಿಲ್ಲ. ಕಾರಣ ಆ ರಿಪೋರ್ಟನ್ನು ಟೇಬಲ್ ಮೇಲೆ ಒಗೆದು— ಬಹಾದ್ದರನು ನನ್ನಿಂದ ಹಿಡಿಯಲ್ಪಟ್ಟರೆ ಎಲ್ಲ ಪ್ರಕರಣಗಳ ನಿಕಾಲೆಯು ಒಮ್ಮೆಲೆ ಆಗು ವದು! ಉಳಿದ ಚೋರರಂತೆ ಅವನು ಅಸಾವಧನಾಗಿರುವದಿಲ್ಲ. ಯಾವ ಅವನ ಕೆಲಸದಲ್ಲಿ ತಪ್ಪೂ ಕಂಡುಬರುವದಿಲ್ಲ! ಅಂದಬಳಿಕ ಅವನನ್ನು ಹಿಡಿಯುವದೆಂತು? ಆದರೂ ನಮ್ಮ ಕರ್ತವ್ಯಕ್ಕನುಸರಿಸಿ ಪ್ರಯತ್ನಿಸಲೇ ಬೇಕಾಗಿದೆ. ಇನ್ನು ತಡಮಾಡುವಂತಿಲ್ಲ! ಬೇಗನೆ ಹೊರಡುವ ಸಿದ್ಧತೆ ಮಾಡಬೇಕೆಂದು ಯೋಚಿಸಿ, ಬಾಬೂರಾಯನು ತನ್ನ ಖುರ್ಚಿಯಿಂದ ಚಟ್ಟನೆ ಎದ್ದನು.

ಬಳಿಕ ಒಳಗೆ ಹೋಗಿ ಸ್ನಾನ, ಭೋಜನಾದಿಗಳನ್ನು ತೀರಿಸಿಕೊಂಡು, ಉತ್ತಮವಾದ ಪೋಲೀಸ ಪೋಷಾಕನ್ನು ಧರಿಸಿ, ಶೀಘ್ರದಿಂದಲೇ ಮನೆ ಯಿಂದ ಹೊರಟು ಹೋದನು. ಕೆಲವು ದಾರಿ ಕ್ರಮಿಸಿದ ಮೇಲೆ, ಒಂದು ಗಾಡಿಯನ್ನು ಗೊತ್ತು ಮಾಡಿಕೊಂಡು, ಪೋಲೀಸ ಕಚೇರಿಯ ಕಡೆಗೆ ನಡೆದರು. ಈ ಉಭಯತರೂ ಹೋಗುವಷ್ಟರಲ್ಲಿ ಸರದಾರಸಿಂಗ ಹಾಗೂ ಭವಾನರಾವ ಎಂಬಿಬ್ಬರು ಇನ್ಸಪೆಕ್ಟರರು ಅಚ್ಚ ಕರೀ ಬಣ್ಣದ ಡ್ರೆಸ್ಸಿನಿಂದ ಸಜ್ಜಾಗಿ ದೇವಡಿಯ ಮೇಲೆ ಬಂದು ನಿಂತುಕೊಂಡಿದ್ದರು. ಅಕಸ್ಮಾತ್ತಾಗಿ ಒಬ್ಬರಿಗೊಬ್ಬರ ಭೆಟ್ಟಿಯಾಗಲು, ಪರಸ್ಪರರಲ್ಲಿ ನಮಸ್ಕಾರ-ಚಮತ್ಕಾರಗಳಾ ದವು. ಬಳಿಕ ಬಾಬೂರಾಯನು— ಸರದಾರಸಾಹೇಬ, ಮತ್ತೇನಾದರೂ ಬಹಾದ್ದರನ ವಿಷಯದ ಹೊಸ ಮಾಹಿತಿಯು ತಿಳಿದಿರುವದೋ? ಎಂದು ಕೇಳಲು, ಅದಕ್ಕೆ ಸರದಾರಸಿಂಗರವರು— ಮತ್ತೇನೂ ಹೊಸ ವಿಷಯ ತಿಳಿದಿಲ್ಲ; ಆಬಗ್ಗೆ ನಾನು ಗಡಿಬಿಡಿಯನ್ನೂ ಮಾಡುವಂತಿಲ್ಲ! ಹೇಗಾದರೂ ಮಾಡಿ ಒಮ್ಮೆ ಅವನನ್ನು ಹಿಡಿಯಬೇಕಾಗಿದೆ. ಒಂದು ಸಾರೆ ಅವನು ನಮ್ಮ ಕೈಗೆ ಸಿಕ್ಕನೆಂದರೆ, ಅವನ ಬಹಾದ್ದರಿಕೆಯ ಗರ್ವವೆಲ್ಲ ಹೊರ

ಬೀಳುವದು. ಅವನನ್ನು ಕನಿಷ್ಠ ಪಕ್ಷ ೧೨ ವರ್ಷಗಳವರೆಗಾದರೂ ಕತ್ತಲ ಕೋಣೆಯಲ್ಲಿ ಕೊಳೆ ಹಾಕುವ ವರೆಗೆ ನನಗೆ ಸಮಾಧಾನವೆನಿಸುವಂತಿಲ್ಲ. ಸಜ್ಜನರಾದ ಶ್ರೀಮಂತರಿಗೆ ಅವನಿಂದ ವಿಶೇಷ ಕಾಟವಾಗಿದೆ. ಯಾಕೆ ಬಾಬೂರಾವ, ಈ ಬಗ್ಗೆ ನಿಮ್ಮ ಅಭಿಪ್ರಾಯವೇನು? ಎಂದು ಕೇಳಲು, ಅದಕ್ಕೆ ಬಾಬೂರಾಯನು— ಸರದಾರಸಾಹೇಬ, ಆ ಗ್ರಹವು ಈಗ ನನ್ನ ಕಡೆಗೇ ಹೊರಳಿದೆ. ನೀವು ನಿನ್ನೆ ನನಗೆ ಭೆಟ್ಟಿಯಾಗಿ ತಿರುಗಿದ ಕೂಡಲೆ ಟೆಲಿಫೋನಿನಿಂದ ಬಹಾದ್ದರನೊಡನೆ ನನ್ನ ಭಾಷಣವು ತಾಸೆರಡು ತಾಸು ಗಳ ವರೆಗೆ ನಡೆಯಿತು. ಈಗ ಅವನ ಆಮಂತ್ರಣದ ಮೇರೆಗೆ ನಾನು ಮಣಿಲಾಲ ಜವಾಹಿರರ ಅಂಗಡಿಗೆ ಹೋಗಬೇಕಾಗಿದೆ. ವೇಳೆಯು ಸಮೀಪಿಸಿದೆ. ಮೊದಲು ಗಾಡಿಯನ್ನು ಹತ್ತಿರಿ. ನಂತರ ಎಲ್ಲ ಸಂಗತಿಗಳನ್ನು ನಿಮಗೆ ತಿಳಿಸುವೆನೆನ್ನಲು ಬಹಾದ್ದರನ ವಿಷಯವನ್ನು ಅಲ್ಪ-ಸ್ವಲ್ಪ ತಿಳಿದಿದ್ದ ಭವಾನರಾಯನೂ ಅತ್ಯಂತ ಉತ್ಸುಕನಾದನು. ಅವರು ಬೇಗನೆ ಗಾಡಿಯನ್ನೇರಿದರು.

ಆಗ ಭವಾನರಾಯನು— ನಾವಾದರೂ ಅತ್ತಕಡೆಗೇ ಹೊರಟಿರುತ್ತೇವೆ. ಯಾಕಂದರೆ ಈ ದಿನ ಅಲ್ಲಿ ನಡೆಯುವ ಲಿಲಾವಿನ ಬಂದೋಬಸ್ತಿಯ ಸಲುವಾಗಿ ನನ್ನ ನೇಮಣೂಕಾಗಿದೆ. ಆ ಲಿಲಾವಿನಲ್ಲಿ ಬಹಳ ಹಳೆಯದಾದ ಒಂದು ಅಮೂಲ್ಯ ರತ್ನವು ಮಾರಾಟವಾಗತಕ್ಕದ್ದಿದೆಯಂತೆ! ಆ ರತ್ನವು ಬಹು ಜನರ ಕಟಾಕ್ಷಕ್ಕೆ ಗುರಿಯಾಗಿದೆ.

ಅದೆಂಥ ರತ್ನ? ಎಂದು ಸರದಾರಸಿಂಗನು ವಿಚಾರಿಸಲು, ನೀಲರತ್ನದಿಂದ ಸರ್ಪವನ್ನು ಮಾಡಿದ್ದು, ಅದರ ಕಣ್ಣುಗಳಲ್ಲಿ ಪುಷ್ಪರಾಗ ರತ್ನವನ್ನು ಕೆಚ್ಚಿರುವರು. ಕತ್ತಲೆಯ ರಾತ್ರಿಯಲ್ಲಿ ಅದರ ಕಣ್ಣುಗಳು ವಿದ್ಯುದ್ದೀಪವಂತೆ ಲಕಲಕಿಸುತ್ತಿವೆಯಂತೆ! ಅದರ ಕ್ರಯವು ಏನಿಲ್ಲೆಂದರೂ ೨ ಲಕ್ಷ ರೂ. ಆಗಬಹುದು. ಆದಕಾರಣ ಅದರ ಸಂರಕ್ಷಣೆಯೇ ಇಂದಿನ ನನ್ನ ಮುಖ್ಯ ಕರ್ತವ್ಯ, ಎಂದನು ಭವಾನರಾಯ.

ಆಗ ಬಾಬೂರಾಯನು— ಆ ನಾಗರಾಜ ವಜ್ರದ ಮೇಲೆಯೇ ಬಹಾದ್ದರನ ಕಟಾಕ್ಷವಿರಬಹುದಾಗಿದೆ. ಅದನ್ನು ಅವನು ಹೇಗೆ ಎಬ್ಬಿಸುವನೋ ನೋಡೋಣ. ಅಂತೂ ಒಳ್ಳೇ ಪ್ರಸಂಗವಿದೆ!

ಗಾಡಿಯು ಒತ್ತರದಿಂದ ಸಾಗಿದ್ದರಿಂದ ಅವರು ಮಣಿಲಾಲನ ಅಂಗಡಿಯನ್ನು ತಲುಪುವದಕ್ಕೆ ತಡವಾಗಲಿಲ್ಲ! ದಾರಿಯಲ್ಲಿ ಭೋಟೋವೂ ಪಿಟ್ಟೆಂದುಸುರಲಿಲ್ಲ. ಯಾಕೆಂದರೆ ಆ ಇಬ್ಬರೂ ಇನಸ್ಪೆಕ್ಟರರು ಬಾಬೂರಾಯನನ್ನು ಸಹ ಗಣನೆಗೆ ತಾರದೆ ಮಾತಾಡುತ್ತಿರುವಾಗ ತನ್ನನ್ನು ಕೇಳುವವರಾರೆಂದು ಆತನು ಸುಮ್ಮನಿದ್ದನು. ಮಣಿಲಾಲ ಜವಾಹಿರನ ಅಂಗಡಿಯು ಬಂದ ಕೂಡಲೆ ಎಲ್ಲರೂ ಇಳಿದರು. ಗಾಡಿಯವನು ತನ್ನ ಬಂಡಿಯನ್ನು ಒತ್ತಟ್ಟಿಗೆ ನಿಲ್ಲಿಸಿದನು.

ಲಿಲಾವಿನ ಸ್ಥಳದಲ್ಲಿ ಸಾಧಾರಣ ಜನರಿಗೆ ಪ್ರವೇಶ ಮಾಡಗೊಡುತ್ತಿದ್ದಿಲ್ಲ. ಯಾಕೆಂದರೆ ಲಕ್ಷಾಂತರ ರೂಪಾಯಿಗಳ ಹರಳು ಕಲ್ಲುಗಳ ಮಾರಾಟವಾಗುವಲ್ಲಿ ಸಾಮಾನ್ಯ ಮನುಷ್ಯರ ಕೆಲಸವೇನು? ಕಾರಣ ಜನರ ಗದ್ದಲವು ವಿಶೇಷವಾಗಿದ್ದಿಲ್ಲ. ಆದ್ದರಿಂದ ಪೋಲೀಸರ ಸಂಖ್ಯೆಯಾದರೂ ತಕ್ಕಷ್ಟೇ ಇತ್ತು. ಬಂಗಲೆಯ ಹೊರಬಾಗಿಲಲ್ಲಿ ಒಬ್ಬ ಕಾನಸ್ಟೇಬಲ್‌ನು ಕುಳಿತಿದ್ದು, ಗುರುತು ತೋರಿಸಿದ ಹೊರತು ಒಳಗೆ ಯಾರನ್ನೂ ಬಿಡುತ್ತಿದ್ದಿಲ್ಲ. ಕಾರಣ ಬಾಬೂರಾಯನು ತನ್ನ ಹೆಸರುಳ್ಳ ಕಾರ್ಡನ್ನು ತೋರಿಸಿದನು. ಭೋಟೋವಂತೂ ಅವನ ಸಿಪಾಯಿಯಾದ್ದರಿಂದ ಸಹಜವಾಗಿಯೇ ಆತನ ಪ್ರವೇಶವಾಯಿತು. ಉಳಿದವರಿಬ್ಬರಂತೂ ಪೋಲೀಸ ಖಾತೆಯ ಅಧಿಕಾರಿಗಳೆಂಬದನ್ನು ಅವರ ಡ್ರೆಸ್ಸೇ ಸ್ಪಷ್ಟವಾಗಿ ತಿಳಿಸುತ್ತಿತ್ತು.

ಲಿಲಾವು ನಡೆದ ಆ ಸ್ಥಳವು ಪ್ರಶಸ್ತವಾಗಿದ್ದು, ಬಹು ಮನೋಹರವಾಗಿತ್ತು. ಅಲ್ಲಿ ನಾನಾತರದ ದೇಶೀ-ವಿದೇಶೀ ಚಿತ್ರಗಳನ್ನು ವ್ಯವಸ್ಥೆಯಿಂದ ಸಾಲಾಗಿ ತೂಗಹಾಕಿದ್ದರು. ಎದುರಿಗಿರುವ ಭದ್ರವಾದ ಹಾಗು ಭವ್ಯವಾದ ಉಕ್ಕಿನ ಕಟಾಂಜನದ ನಡುವೆ ಒಂದು ಗಟ್ಟಿಮುಟ್ಟಾದ ಕಬ್ಬಿಣ ಕಪಾಟು ( ತಿಜೋರಿ ) ಇಡಲ್ಪಟ್ಟಿದ್ದು, ಅದರಲ್ಲಿ ಅಮೂಲ್ಯವಾದ ಎಲ್ಲ ವಜ್ರ–ವೈಡೂರ್ಯಾದಿಗಳೂ ಇಡಲ್ಪಟ್ಟಿದ್ದವು. ಹೊರಗಿನಿಂದ ನೋಡುವವರಿಗೆ ಆ ಕಟಾಂಜನವನ್ನು ದಾಟಿ ಆ ಅಭೇದ್ಯವಾದ ತಿಜೋರಿಯನ್ನು ಭೇದಿಸುವದು ಕಳ್ಳರಿಗಾಗಲಿ, ದರವಡೆಖೋರರಿಗಾಗಲಿ ಅಸಾಧ್ಯವೆಂದು ಕಂಡುಬರುತ್ತಿತ್ತು. ಬಾಬೂರಾಯನು ತನ್ನ ಸೂಕ್ಷ್ಮ ದೃಷ್ಟಿಯಿಂದ ಲಿಲಾವಿಗಾಗಿ ನೆರೆದ ಶೇಟ–ಸಾವುಕಾರರನ್ನು ಅವಲೋಕಿಸಿದನು. ಲಿಲಾವಿಗಾಗಿ

ನೆರೆದವರು ೧೦–೧೨ ಜನರಿಗಿಂತ ಹೆಚ್ಚಿರಲಿಲ್ಲ. ಅವರಲ್ಲಿ ಬಹುಶಃ ಎಲ್ಲರೂ ಗುರುತಿನವರೇ ಇದ್ದು, ಒಬ್ಬಿಬ್ಬರು ಮಾತ್ರ ಅಪರಿಚಿತರಾಗಿ ಕಂಡಾಗ್ಯೂ ಅವರನ್ನು ತುಡುಗರೆಂದು ಭಾವಿಸಲು ಅವಕಾಶವಿರಲಿಲ್ಲ.

ಇನಸ್ಪೆಕ್ಟರರು ಈ ಎಲ್ಲ ಜನರನ್ನು ನೋಡಿ ಬಾಬೂರಾಯನಿಗೆ ಇಂಥ ಅಸಾಧ್ಯ ಸ್ಥಳದಲ್ಲಿ ಬಹಾದ್ದರನಂಥವರ ಪ್ರವೇಶವಾಗುವದೆಂತು ? ಅವನು ನಮ್ಮನ್ನು ಸುಮ್ಮನೆ ಹೆದರಿಸುವದಕ್ಕಾಗಿ ಸುಳ್ಳು ಆಮಂತ್ರಣ ವನ್ನು ಕೊಟ್ಟಿರಬಹುದು ಎಂದು ಮೆಲ್ಲನೆ ನುಡಿದರು. ಅದಕ್ಕೆ ಬಾಬೂ ರಾಯನು— ಲಿಲಾವು ಈಗ ಪ್ರಾರಂಭವಾಗಿದೆ. ಅವನು ಇಲ್ಲಿಗೆ ಬರಲಿಕ್ಕೆ ಇನ್ನೂ ಅವಕಾಶವಿದೆ. ಒಂದುವೇಳೆ ಇನ್ನುಮೇಲೆ ಬಂದರೂ ಬರಬಹುದು. ಆ ಚಾಣಾಕ್ಷನು ನೀವಂದಂತೆ ನಮ್ಮನ್ನು ಮೋಸಗೊಳಿಸಿರಬಹುದೇನು ? ಇಲ್ಲಿಗೆ ಬರದಿದ್ದರೇ ಅವನ ಜಾಣತನ. ಇಲ್ಲವಾದರೆ ಅವನು ಇಲ್ಲಿಂದ ಪಾರಾಗಿ ಹೋಗುವದೆಂತು ? ಎಂದು ಗರ್ವದಿಂದ ನುಡಿದನು.

ಮಣಿಲಾಲನ ಅಂಗಡಿಯೊಳಗೆ ಲಿಲಾವು ನಡೆದ ಸ್ಥಳದಲ್ಲಿ ಒಳಗೆ ಪ್ರವೇಶ ಮಾಡಿ, ವಜ್ರ–ಮಾಣಿಕ್ಯಗಳನ್ನು ಕದ್ದುಕೊಂಡು ಪಾರಾಗಿ ಹೋಗು ವದು ಎಂಥ ಕಳ್ಳನಿಗಾದರೂ ಅಶಕ್ಯವೇ ಸರಿ ! ಆ ನಡುಪೇಟೆಯೊಳಗಿ ರುವ ಭದ್ರವಾದ ಅಂಗಡಿಯಲ್ಲಿ ಈ ದಿನ ಬಾಬೂರಾವ, ಇನಸ್ಪೆಕ್ಟರ ಸರ ದಾರಸಿಂಗ, ಭವಾನರಾವ, ಘೋಟೋ, ಕಾನಸ್ಟೇಬಲ್ ಇವರ ಹೊರ್ತಾಗಿ ಇಬ್ಬರು ಜಾಣ ಡಿಟೆಕ್ಟಿವ್ಹರು, ಇಷ್ಟು ಜನರು ಪ್ರತಿಯೊಬ್ಬ ಗಿರಾಕಿಯ ಮೇಲೆ ಸೂಕ್ಷ್ಮ ದೃಷ್ಟಿಯನ್ನಿಟ್ಟಿರಲು, ಅದಾವ ಕಳ್ಳನವನು ಇಲ್ಲಿಂದ ಪಾರಾ ಗುವವನು ? ಎಂದು ಯಾರಿಗಾದರೂ ಅನಿಸುತ್ತಿತ್ತು.

ಇಷ್ಟರಲ್ಲಿ ಮಣಿಲಾಲನ ದೃಷ್ಟಿಯು ಬಾಬೂರಾಯನ ಮೇಲೆ ಬಿದ್ದಿತು. ಆಗ ಅವನು—ಯಾಕೆ ಬಾಬೂರಾವ, ಇತ್ತ ಕಡೆಗೆ ಬಂದಿರುವಿರಿ ? ನೀವೇ ನಾದರೂ ಈ ವಸ್ತುಗಳನ್ನು ಲಿಲಾವಿನಲ್ಲಿ ಕೊಂಡುಕೊಳ್ಳುವಿರೇನು ? ಎಂದು ಕೇಳಿದನು. ಅದಕ್ಕೆ ಬಾಬೂರಾಯನು—ನಮ್ಮಂಥ ದರಿದ್ರರಿಂದ ಇಂಥ ಅಮೂಲ್ಯ ವಸ್ತುಗಳ ಖರೀದಿಯು ಹೇಗೆ ಸಾಧ್ಯವಾದೀತು ? ಆದ ಕಾರಣ ಆ ವಸ್ತುಗಳನ್ನು ಕಣ್ಣಿನಿಂದ ನೋಡಿಯಾದರೂ ತೃಪ್ತಿ ಪಡೋಣ ವೆಂದು ಬಂದಿರುವೆನೆಂದು ನುಡಿದನು.

ಮಣಿಲಾಲನು ತನ್ನ ಸ್ವಾಭಾವಿಕ ಐಶ್ವರ್ಯ ಮದದಿಂದ ಯುಕ್ತವಾದ ಮುಗುಳುನಗೆಯಿಂದ— ಹೌದು,-ಹೌದು, ಬಾಬೂರಾವ, ನಿಮ್ಮಂಥ ನೌಕರರಿಗದು ಅಸಾಧ್ಯವೇ ಸರಿ! ಆದರೆ ಈ ಸಾವುಕಾರ ಜನರಲ್ಲಿ ಬಂದಿರುವ ಈ ಸಭ್ಯ ಗೃಹಸ್ಥನೊಬ್ಬನ ಪರಿಚಯವು ಬಹುಶಃ ನಮಗಿರಲಿಕ್ಕಿಲ್ಲ. ಈತನ ಹೆಸರು ಸರ ಪೋಪಟಲಾಲ ಮಣಿಭಾಯಿ ಎಂದಿರುವದು. ಈ ಧನವಂತನ ಪರಿಚಯವು ನಿಮಗಿರದಿದ್ದರೂ ಈತನ ತಂದೆಯನ್ನು ನೀವು ಅರಿತಿರಬಹುದಾಗಿ ಕಾಣುತ್ತದೆ.

ಬಾಬೂರಾಯನ ಹತ್ತಿರದಲ್ಲೇ ಒಳ್ಳೇ ಸಭ್ಯ ಗೃಹಸ್ಥನಂತೆ ಪೋಷಾಕು ಹಾಕಿಕೊಂಡಿರುವ ಶ್ರೀಮಂತ ತರುಣನೊಬ್ಬನು ನಿಂತುಕೊಂಡಿದ್ದನು. ಮಣಿಲಾಲನು ಅವನ ಕಡೆಗೆ ಬೆರಳು ಮಾಡಿ ಮಾತಾಡಿದ್ದರಿಂದ, ಬಾಬೂರಾಯನು ಅವನ ಕಡೆಗೆ ಹೊರಳಿ, ಅವನಿಗೆ ಜಯ ಗೋಪಾಳವನ್ನು ಮಾಡಿದನು.

ಸರ ಪೋಪಟಲಾಲ ಮಣಿಭಾಯಿ—ಬಾಬೂರಾವ, ತಮ್ಮ ದರ್ಶನವಾದ್ದರಿಂದ ನನಗೆ ಬಹಳ ಸಂತೋಷವಾಗಿದೆ. ತಮ್ಮ ಚಾತುರ್ಯದ ಪ್ರಸಿದ್ಧಿಯನ್ನು ಎಷ್ಟೋ ಕಡೆಯಲ್ಲಿ ಓದಿ ತಿಳಿದೆನು; ಇದೂ ಅಲ್ಲದೆ ಒಂದು ಮಹತ್ವದ ಪ್ರಸಂಗದಲ್ಲಿ ನನ್ನ ತಂದೆಯವರಿಗೆ ನೀವು ಚನ್ನಾಗಿ ಸಹಾಯ ಮಾಡಿರುವಿರೆಂದು ಅವರು ಆಗಾಗ್ಗೆ ನಿಮ್ಮನ್ನು ಸ್ಮರಿಸುತ್ತಿದ್ದರು, ಎನ್ನಲು, ಅದಕ್ಕೆ ಬಾಬೂರಾಯನು-ಹೌದು; ನೀವೆನ್ನುವದು ನಿಜವು. ಒಂದು ಕಠಿಣ ಪ್ರಸಂಗದಲ್ಲಿ ಅವರು ನನ್ನ ಸಹಾಯದಿಂದ ಪಾರಾಗಿರುವರು. ಅವರು ಬಹಳ ಉದಾರ ಮನುಷ್ಯರಿದ್ದು, ಅವರ ಮರಣದ ಸುದ್ದಿಯನ್ನು ಕೇಳಿ ನನಗೆ ಒಬ್ಬ ಪರಮಾಪ್ತನು ತೀರಿಕೊಂಡಷ್ಟು ದುಃಖವಾಯಿತು, ಎಂದು ನುಡಿದನು.

ಸದಯಾಂತಃಕರಣಿಯಾದ ತಂದೆಯ ನೆನಪಾದ್ದರಿಂದ, ತರುಣ ಪೋಪಟಲಾಲನಿಗೂ ಬಹಳ ದುಃಖವೆನಿಸಿತು. ಅವನ ಕಣ್ಣುಗಳು ನೀರಿನಿಂದ ತುಂಬಿದವು. ಕಂಠವು ಬಿಗಿದು ಮಾತುಗಳೇ ಹೊರಡದಾದವು. ಆದರೂ ಅದನ್ನೆಲ್ಲ ಸಹಿಸಿಕೊಂಡು ಗಂಭೀರ ಭಾವದಿಂದ— ಬಾಬೂರಾವ,

ನೀವು ತೋರಿಸಿದ ಸಹಾನುಭೂತಿಗಾಗಿ, ನಾನು ಅತ್ಯಂತ ಆಭಾರಿಯಾಗಿದ್ದೇನೆ. ನನ್ನ ತಂದೆಯ ಮರಣಕಾಲಕ್ಕೆ ನಾನು ಹತ್ತರಿಲ್ಲದ್ದೊಂದು ವ್ಯಸನವು ನನಗೆ ಆಮರಣಪರ್ಯಂತ ತಪ್ಪುವಂತಿಲ್ಲ. ಆರು ವರ್ಷಗಳ ವರೆಗೆ ಆಫ್ರಿಕೆಯಲ್ಲಿದ್ದು, ಬಳಿಕ ಅಮೇರಿಕಾಕ್ಕೆ ಹೋಗಿ ಒಂದು ವರ್ಷವಾಗಿತ್ತು. ಅಲ್ಲಿ ಈ ದುಃಖಕರವಾದ ಸುದ್ದಿಯು ಹತ್ತಿದ್ದರಿಂದ ನಾನು ಊರಿಗೆ ಬರಬೇಕಾಯಿತು.

ಈಗ ನೀವು ರತ್ನಗಳ ಖರೀದಿಗೆ ಬಂದಿರುವಿರೇನು? ಎಂದು ಬಾಬೂರಾಯನು ಕೇಳಲು, ಅದಕ್ಕೆ ಪೋಪಟಲಾಲನು:—ದಿಲ್ಲಿಯ ಜಹಾಂಗೀರ ಬಾದಶಹನ ಪ್ರೀತಿಯ ರಾಣಿಯಾದ ನೂರಜಹಾನಳ ಕಿವಿಯೊಳಗಿನ ವಜ್ರದ ಕರ್ಣ-ಕುಂಡಲಗಳು ಈ ದಿನ ಇಲ್ಲಿ ಲಿಲಾವಿಗಾಗಿ ಬಂದಿವೆಯೆಂದು ಕೇಳಿರುವೆನು. ಅಂಥ ಅಮೂಲ್ಯ ವಸ್ತುಗಳು ಭರತಖಂಡದ ಬೇರೆ ರಾಜರಲ್ಲಿ ಅಪರೂಪವಾಗಿಯೇ ದೊರೆಯಬಹುದು. ಆ ಕುಂಡಲಗಳ ಖರೀದಿಗಾಗಿ ನಾನು ಬಂದಿರುವೆನು. ಇನ್ನು ಸ್ವಲ್ಪ ದಿವಸಗಳಲ್ಲಿ ಆಗತಕ್ಕ ನನ್ನ ವಿವಾಹದಲ್ಲಿ ನನ್ನ ಪ್ರಿಯ ಪತ್ನಿಯ ಪ್ರೀತ್ಯರ್ಥವಾಗಿ ನನಗೆ ಈ ಕುಂಡಲಗಳು ಬೇಕಾಗಿರುತ್ತವೆ, ಎಂದನು.

ಬಾಬೂರಾಯ— ಇಂಥ ಅಪರೂಪವಾದ ವಸ್ತುಗಳಿದ್ದ ಮೇಲೆ ಅವುಗಳನ್ನು ಇಲ್ಲರೂ ಪ್ರೀತಿಸುವವರೇ. ಲಿಲಾವಿಗೆ ಹಚ್ಚಿದ ಬಳಿಕ ಎಷ್ಟು ಬೆಲೆ ಬಾಳುವವೋ-ಯಾರಿಗೆ ದೊರೆಯುವವೋ ತಿಳಿಯುವ ಬಗೆ ಹೇಗೆ?

ಪೋಪಟಲಾಲ—ಯಾರು ಹೆಚ್ಚು ದುಡ್ಡು ಕೊಡುವರೋ ಅವರಿಗೇ ಸಿಗುವವು, ಅದರಲ್ಲೇನು? ನಾನಂತೂ ಬೇಕಾದಷ್ಟು ಹಣ ಬಿದ್ದರೂ ಅವುಗಳನ್ನು ಬಿಡುವಂತಿಲ್ಲ. ಅಂಥ ಅಪರೂಪವಾದ ಆಭರಣಗಳನ್ನು ನೀವು ಎಲ್ಲಿಯೂ ನೋಡಿರಲಿಕ್ಕಿಲ್ಲ! ಮಣಿಲಾಲ, ತೋರಿಸಿರಿ ಅವನ್ನಷ್ಟು ಬಾಬೂರಾಯರಿಗೆ! ನೋಡಿ ಕಣ್ಣುಗಳು ಸಾಫಲ್ಯವನ್ನು ಹೊಂದಲಿ! ಎನ್ನಲು, ಆಗ ಮಣಿಲಾಲನು ತಿಜೋರಿಯೊಳಗಿನ ಒಂದು ಸುವರ್ಣದ ಕರಡಿಗೆಯನ್ನು ತೆಗೆದು ಪೋಪಟಲಾಲನ ಕೈಯಲ್ಲಿ ಕೊಟ್ಟನು. ಅದರ ಜೊತೆಗೆ ನಾಗಮಣಿಯನ್ನೂ ತೋರಿಸಲಿಕ್ಕೆ ಮರೆಯಲಿಲ್ಲ.

ಸಾಧಾರಣ ಕಳ್ಳಸಂತೆ ಸಹಜವಾಗಿ ಕೈವಶವಾಗಲಿಕ್ಕಿಲ್ಲ ! ಕಾರಣ ಆದಷ್ಟು ಜಾಗರೂಕರಾಗಿರುವದೇ ತಕ್ಕದ್ದು, ಎಂದು ಬಾಬೂರಾಯನು ನುಡಿಯಲು, ಎಲ್ಲರೂ ಅದಕ್ಕೆ ಸಮ್ಮತಿಸಿ ಕುಳಿತುಕೊಂಡರು. ಲೀಲಾವಿನ ಕೆಲಸವು ಭ ಸದಿಂದ ಸಾಗಿತು.

ಎಷ್ಟೋ ಅಮೂಲ್ಯ ವಸ್ತುಗಳು ಯೋಗ್ಯ ಬೆಲೆಗೆ ಮಾರಲ್ಪಟ್ಟವು. ಕಡೆಗೆ ಮುಖ್ಯ ವಸ್ತುವಿನ ಅಂದರೆ ಕರ್ಣಕುಂಡಲದ ಲಿಲಾವಿಗೆ ಪ್ರಾರಂಭ ವಾಯಿತು. ಮಣಿಲಾಲನು ಮೇಜಿನ ಎದುರಿಗೆ ಕುಳಿತುಕೊಂಡು ಸಾಮಾ ನುಗಳನ್ನು ಲಿಲಾವು ಮಾಡುತ್ತಿದ್ದನು. ಹಸ್ತಿದಂತ ಹಾಗು ಬಂಗಾರದಿಂದ ಮಾಡಿದ ಒಂದು ಸುಂದರ ಕರಡಿಗೆಯನ್ನು ಹೊರಗೆ ತೆಗೆದು, ಮಣಿಲಾ ಲನು ಗಿರಾಕಿಗಳನ್ನು ಕುರಿತು:—ಮಹಾನುಭಾವರಾದ ರಸಿಕ ಶೇಟ-ಸಾವು ಕಾರರೇ, ಇವನ್ನು ನೋಡಿರಿ! ನೂರಜಹಾನ ರಾಜ್ಞಿಯ ಕರ್ಣಭೂಷಣಗ ಳಾದ ಈ ವಜ್ರಕುಂಡಲಗಳು ! ಪೃಥ್ವಿಯಲ್ಲೇ ಅಪರೂಪವಾದ ವಸ್ತುಗಳು ! ಇವುಗಳ ಸೌಂದರ್ಯವನ್ನು ವರ್ಣಿಸಲಸಾಧ್ಯವು. ಇವುಗಳನ್ನು ಮಾಡಿದವನ ಬುದ್ಧಿಗೆ ಬೆಲೆಯೇ ಇಲ್ಲ! ಯಾರು ವಿಲಾಸಪ್ರಿಯರಾಗಿರುವರೋ ಅವರು ಇವುಗಳನ್ನು ಕೊಂಡೇ ತೀರಬೇಕು. ಇವುಗಳ ಲಿಲಾವಿನ ನಂಬರ ೮೭ನೇದಿದ್ದು, ಮೊದಲನೇ ಸವಾಲು ೨೦ ಸಾವಿರ ಪೌಂಡುಗಳು.

ಮಣಿಲಾಲನ ಸಮೀಪದಲ್ಲಿಯೇ ಆಜಾನುಬಾಹುಗಳುಳ್ಳ ಲಂಬೋದರ ಸ್ವರೂಪಿಯಾದ ಭವ್ಯ ತರುಣನೊಬ್ಬನು ಪಾದದ ವರೆಗೂ ಓವ್ಹರ ಕೊಟ ನ್ನು ಹಾಕಿಕೊಂಡು. ಎರಡೂ ಕಿಸೆಗಳಲ್ಲಿ ಕೈಗಳನಿಟ್ಟು ಗಾಂಭೀರ್ಯ ದಿಂದ ನಿಂತುಕೊಂಡಿದ್ದನು. ಅವನು ಮುಂಬೈಯೊಳಗಿನ ರತ್ನದ ದೊಡ್ಡ ವ್ಯಾಪಾರಿಯು: ಮಣಿಲಾಲನ ಮಾತು ಮುಗಿದ ಕೂಡಲೆ ಅವನು:—೩೦ ಸಾವಿರ ಪೌಂಡು ಎಂದು ಒದರಿದನು.

ಮಣಿಲಾಲನು ಮೇಲಕ್ಕೆ ಕೈ ಎತ್ತಿ—೩೦ ಸಾವಿರ ಪೌಂಡುಗಳೆಂದರೆ, ಇದರೊಳಗಿನ ಒಂದು ರತ್ನದ ಕಿಮ್ಮತ್ತಾಗಲಿಕ್ಕಿಲ್ಲ ! ನೋಡಿರಿ, ಇಂಥ ಸಂಧಿಯು ದೊರೆಯಲಿಕ್ಕಿಲ್ಲ, ಎನ್ನಲು,

ಗಂಭೀರ ಮುದ್ರೆಯಿಂದ ಬಾಬೂರಾಯನ ಸಮಿಪದಲ್ಲಿಯೇ ನಿಂತು

ಕೊಂಡಿದ್ದ ಪೋಪಟಲಾಲನು ಒಮ್ಮೆಲೆ ೪೦ ಸಾವಿರ ಪೌಂಡು ಎಂದು ಕೂಗಿದನು.

ಕೂಡಲೆ ಮೊದಲು ಬೇಡಿದ ರತ್ನವ್ಯಾಪಾರಿಯು ಕಂಪಿತ ಸ್ವರದಿಂದ ೪೫ಸಾವಿರ ಪೌಂಡುಗಳೆಂದು ನುಡಿದನು.

ಮಣಿಲಾಲನು ಮತ್ತೆ ಕೈ ಎತ್ತಿ— ೪೫ ಸಾವಿರ ಪೌಂಡು ಮೊದಲನೇ ಸವಾಲು ಎಂದು ಒದರಿದನು.

ತೀವ್ರವೇ ಪೋಪಟಲಾಲನು— ೪೬ ಸಾವಿರ ಪೌಂಡುಗಳೆಂದು ಸಾರಿ ಹೇಳಿದನು.

ಹೀಗೆ ಒಬ್ಬರಿಗೊಬ್ಬರು ಸ್ಪರ್ಧೆಯಿಂದ ಅಳತೆಗೆಟ್ಟು ಬೆಲೆ ಏರಿಸುವದನ್ನು ಕಂಡು ಬಾಬೂರಾಯನಿಗೆ ವಿಚಿತ್ರವೆನಿಸಿತು. ಎಂಥ ಮೂರ್ಖರಿವರು? ಕರ್ಣಕುಂಡಲಗಳೆಂದರೇನು? ೪೬ ಸಾವಿರ ಪೌಂಡುಗಳೆಂದರೇನು? ಬೆಲೆಯು ಮಿತಿಮೀರಿತು! ಇಷ್ಟು ಹಣ ವೆಚ್ಚಮಾಡಿ, ಇವುಗಳನ್ನು ಕೊಂಡುಕೊಂಡು ಹೋಗಿ ಸ್ತ್ರೀಯರ ಕಿವಿಯಲ್ಲಿಟ್ಟು ಕೃತಾರ್ಥರಾಗಬೇಕೆನ್ನುವ ಇವರಿಗೆ ಏನೆನ್ನಬೇಕೋ ತಿಳಿಯದಾಗಿದೆ! ನನಗಂತೂ ಇನ್ನು ಬಹಾದ್ದರನನ್ನು ಹಿಡಿಯುವ ಆಶೆಯಿಲ್ಲ. ಬೇಗನೇ ಇದನ್ನಷ್ಟು ಮುಗಿಸಿಕೊಂಡು ಹೋಗಬೇಕೆಂದರೆ ತೀವ್ರ ತೀರಲೊಲ್ಲದು, ಎಂದು ಗುಣುಗುಟ್ಟುತ್ತ ನಿಂತುಕೊಂಡಿದ್ದನು.

ಇತ್ತ ಪೋಪಟಲಾಲನಿಗೂ, ಮುಂಬಯಿಯ ರತ್ನವ್ಯಾಪಾರಿಗೂ ಲಿಲಾವಿನ ಬಗ್ಗೆ ಮೇಲಾಟ ನಡೆಯಿತು. ಆ ರತ್ನವ್ಯಾಪಾರಿಯು ಏರಿಸುತ್ತ ಏರಿಸುತ್ತ ಅದನ್ನು ಒಂದು ಲಕ್ಷ ಪೌಂಡಿಗೆ ಒಯ್ದು ಮುಟ್ಟಿಸಿದನು. ಆದರೂ ಪೋಪಟಲಾಲನು ಬೆದರಲಿಲ್ಲ ಇವನು ಒಂದು ಲಕ್ಷ ಹತ್ತು ಸಾವಿರ ಪೌಂಡುಗಳೆಂದು ಸಾರಿದ ಕೂಡಲೆ ರತ್ನವ್ಯಾಪಾರಿಯು ಹಿಂದಕ್ಕೆ ಸರಿದನು. ಆಗ ಮಣಿಲಾಲನು ಪದ್ಧತಿಯಂತೆ ಮೂರು ಸಾರೆ ಕೂಗಿ, ಪೋಪಟಲಾಲನೇ ಕೊನೆಯ ಲಿಲಾವುದಾರನೆಂದು ನಿರ್ಣಯಿಸಿ, ಅವನ ಹೆಸರಿಗೆ ಲಿಲಾವು ಮಂಜೂರ ಮಾಡಿದನು, ಆಗ ಪೋಪಟಲಾಲನು ಮಣಿಲಾಲನನ್ನು ಕುರಿತು,—ಈ ಹಣದ ಬಗ್ಗೆ ಚಕ್ಕ ಕೊಟ್ಟರೆ ನಡೆಯುವ

ದಿಲ್ಲವೆ? ಯಾಕೆಂದರೆ ಇಷ್ಟು ಹಣವನ್ನು ಸಂಗಡ ಕಟ್ಟಿಕೊಂಡು ಬರುವದು ಅಶಕ್ಯವು! ಎನಲು, ಅವಕ್ಕೆ

ಮಣಿಲಾಲನು— ಅವಶ್ಯ ನಡೆಯುವದು. ಏನೂ ಅಡ್ಡಿಯಿಲ್ಲ. ಚಕ್ಕು ಬರೆದು ಕೊಡಿರೆನ್ನಲು, ಪೋಪಟಲಾಲನು ಕಿಸೆಯೊಳಗಿನ ಚಿಕ್ಕು ಬುಕ್ಕು ತೆಗೆದು, ಮುಂಬಯಿಯೊಳಗಿನ ಇಂಪೀರಿಯಲ್ ಬ್ಯಾಂಕಿಗೆ ನಿರ್ದಿಷ್ಟವಾದ ರಕಮಿನ ಚಿಕ್ಕು ಬರೆದು ಕೊಟ್ಟನು. ಅದು ಮುಟ್ಟಿದಂತೆ ಮಣಿಲಾಲನಿಂದ ಪಾವತಿಯೂ ದೊರೆಯಿತು. ಇನ್ನು ಮಣಿಲಾಲನು ಆ ಅಭರಣವನ್ನು ಪೋಪಟಲಾಲನಿಗೆ ಒಪ್ಪಿಸುವದಿಷ್ಟೇ ಉಳಿಯಿತು.

ಆಗ ಬಾಬೂರಾಯನು ಪೋಪಟಲಾಲನನ್ನು ಕುರಿತು— ಈ ಆಭರಣವನ್ನು ಎಚ್ಚರದಿಂದ ಮನೆಗೆ ತಕ್ಕೊಂಡು ಹೋಗಿರಿ; ಯಾಕಂದರೆ, ಎಷ್ಟೋ ಬದಮಾಷ್ ಜನರ ಕಣ್ಣು ಈ ಆಭರಣದ ಮೇಲಿದೆ! ಆ ಬಹಾದ್ದರನೆಂಬ ಕಳ್ಳನಿಗೆ ಇಲ್ಲಿ ಕಳವು ಮಾಡಲು ಅಶಕ್ಯವಾಗಿರಲು, ಅವನು ದಾರಿಯಲ್ಲಿ ಏನಾದರೂ ಮೋಸ ಮಾಡಬಹುದಾಗಿದೆ. ಎನಲು,

ಪೋಪಟಲಾಲನು— ನಿಮ್ಮಂಥ ಪೋಲೀಸ ಅಧಿಕಾರಿಗಳ ಕಾವಲಿರಲು, ನನಗೇತರ ಅಂಜಿಕೆ? ನನ್ನ ಗಾಡಿ ಇದೆ; ಸಂಗಡ ನೀವಿದ್ದೀರಿ ಸ್ವಲ್ಪಾದರೂ ಭಯವಿಲ್ಲದೆ ಮನೆಯನ್ನು ಸೇರುವೆನು, ಎಂದನು.

ಆಗ ಬಾಬೂರಾಯನ ಸೂಚನೆಯ ಮೇರೆಗೆ ಆ ಇಬ್ಬರು ಪೋಲಿಸ ಇನಸ್ಪೆಕ್ಟರರು ಪೋಪಟಲಾಲನನ್ನು ಸುರಕ್ಷಿತವಾಗಿ ಅವನ ಮನೆ ಮುಟ್ಟಿಸಲಿಕ್ಕೆ ಸಜ್ಜಾದರು.

ಮಣಿಲಾಲನು ಕರ್ಣಭೂಷಣದ ಪೆಟ್ಟಿಗೆಯನ್ನು ಪೋಪಟಲಾಲನ ಕೈಯಲ್ಲಿ ಕೊಡುವಾಗ ಅವನನ್ನು ಕುರಿತು— ನೂರಜಹಾನ ರಾಜ್ಞಿಯ ಈ ಅಮೂಲ್ಯ ಕರ್ಣಕುಂಡಲಗಳು ಯೋಗ್ಯ ಮನುಷ್ಯರ ಕೈಸೇರಿದಂತಾದವು. ಇವುಗಳಿಂದ ನಿಮ್ಮ ಸುಖ-ಸಂಪತ್ತುಗಳು ಹೆಚ್ಚಲಿ! ದಂಪತಿಗಳಲ್ಲಿ ಪ್ರೇಮವು ಬೆಳೆದು, ನಿಮ್ಮ ಸಂಸಾರವು ಸುಖಕರವಾಗಲಿ! ಎಂದು ನುಡಿದು, ಆ ಪೆಟ್ಟಿಗೆಯನ್ನು ಪೋಪಟಲಾಲನ ಕೈಗಿತ್ತನು.

ಆ ಪೆಟ್ಟಿಗೆಯನ್ನು ಸ್ವೀಕಾರ ಮಾಡಮಾಡುತ್ತ ಪೋಪಟಲಾಲನು--

ಹೌದು, ಹೌದು! ನೀವೆನ್ನುವದು ನಿಜವು. ಅಂತೆಯೇ ಇಷ್ಟು ಅಪಾರ ಬೆಲೆ ಯನ್ನು ಕೊಟ್ಟು ಇವುಗಳನ್ನು ಕೊಂಡಿರುವೆನು. ಇಷ್ಟೇ ಅಲ್ಲ. ಇವ ಗಳನ್ನು ಈ ದಿನ ಎಷ್ಟು ಬೆಲೆ ಬಿದ್ದರೂ ಕೊಂಡೇ ತೀರಬೇಕೆಂದು ನನ್ನ ನಿಶ್ಚಯವಿತ್ತು! ಎಂದು ಗರ್ವದಿಂದ ನುಡಿದನು.

ಬಳಿಕ ಪೋಪಟಲಾಲನು ಎಲ್ಲರ ಸಮಕ್ಷಮ, ಆ ಪೆಟ್ಟಿಗೆಯನ್ನು ತೆರೆದು ನೋಡಿ, ಚಕಿತ ಮುದ್ರೆಯಿಂದ— ಮಣಿಲಾಲರೆ, ಯಾವ ಪೆಟ್ಟಿಗೆ ಯನ್ನು ನನ್ನ ಕೈಗಿತ್ತಿರಿ? ಎಂದು ತೀವ್ರ ಸ್ವರದಿಂದ ಕೇಳಿದನು.

ಮಣಿಲಾಲನು— ಹಾ! ಏನು. ನನ್ನಿಂದ ತಪ್ಪಾಗಿರುವದೇ? ಶಕ್ಯ ವಿಲ್ಲ ಶಕ್ಯವಿಲ್ಲ! ನಾನು ನಿಶ್ಚಯವಾಗಿಯೂ ಕರ್ಣಭೂಷಣದ ಪೆಟ್ಟಿಗೆ ಯನ್ನೇ ನಿಮ್ಮ ಕೈಗಿತ್ತಿರುವೆನು. ಎನ್ನುತ್ತ ಎದ್ದು ಬಂದು ಆ ಪೆಟ್ಟಿಗೆಯನ್ನು ಸಂಪೂರ್ಣವಾಗಿ ನಿರೀಕ್ಷಿಸಿದನು; ಆದರೆ ಅದರಲ್ಲಿ ಕರ್ಣಕುಂಡಲಗಳೇ ಇರಲಿಲ್ಲ. ಅದರಲ್ಲಿಯ ಆಭರಣಗಳು ಎತ್ತ ಮಾಯವಾದವೆಂಬುದು ಯಾರಿಗೂ ತಿಳಿಯದಾಯಿತು! ಈ ಕಣ್ಣುಕಟ್ಟನ್ನು ಯಾರು ಮಾಡಿದ ಬಹುದು?

## ಅದ್ಭುತ ಚಮತ್ಕಾರ!

ಈ ಪ್ರಕಾರ ವಿಚಿತ್ರ ಸಂಗತಿಯೊದಗಿದ್ದನ್ನು ಕಂಡು, ಮಣಿಲಾಲನ ಸ್ಮೃತಿದಪ್ಪಿತು. ಅವನ ಮೇಲೆ ಆಕಾಶವೇ ಕಳಚಿ ಬಿದ್ದಂತಾಗಿ, ದಿಙ್ಮೂಢನಾದ ಅವನು ಒಮ್ಮೆಲೆ ನೆಲಕ್ಕೆ ಕುಸಿ ಕುಳಿತನು. ಅವನ ಬಾಯಿಂದ ಮಾತುಗಳೇ ಹೊರಡದಾದವು. ಶ್ವಾಸವು ಒತ್ತರದಿಂದ ಆಡಹತ್ತಿತು.

ಯಾವತ್ತೂ ಜನರು ಸ್ತಬ್ಧರಾಗಿ, ಗೊಂಬೆಯಂತೆ ನಿಂತುಬಿಟ್ಟರು. ಒಂದು ಸಣ್ಣ ಸೂಜಿ ನೆಲಕ್ಕೆ ಬಿದ್ದರೂ ಅದರ ಸಪ್ಪಳವು ಎಲ್ಲರಿಗೂ ಸಹಜವಾಗಿ ಕೇಳಿಸುವಷ್ಟು ಶಾಂತತೆಯು ಆ ಕೋಣೆಯಲ್ಲಿ ನೆಲೆಗೊಂಡಿತ್ತು. ಸ್ವಲ್ಪ ಹೊತ್ತಿನ ಮೇಲೆ ಮಣಿಲಾಲನು ಚೇತರಿಸಿಕೊಂಡು— ನನ್ನ ಅಮೂ

ಲ್ಯವಾದ ಆ ಕರ್ಣಭೂಷಣಗಳು ಹೇಗೆ ಅದೃಶ್ಯವಾದವು ? ಎಲ್ಲಿ ಹೋದವು? ಎಂದು ತಡವರಿಸುತ್ತ ನುಡಿದನು.

ಪೋಪಟಲಾಲ— ನಾನಾದರೂ ನಿಮ್ಮನ್ನು ಅದೇ ವಿಷಯವಾಗಿ ವಿಚಾರಿಸುತ್ತೇನೆ. ಕಪಾಟಿನೊಳಗಿಂದ ಕರಡಿಗೆಯನ್ನು ತೆಗೆಯುವಾಗ ಬೇರೆ ಆಭರಣದ ಪೆಟ್ಟಿಗೆ ಕೊಟ್ಟಿರಬಹುದು. ನೋಡಿರಿ, ಇನ್ನೊಮ್ಮೆ ಚನ್ನಾಗಿ ಪರೀಕ್ಷಿಸಿರಿ ! ಸುಮ್ಮನೆ ಹೀಗೆ ಹತಬದ್ಧರಾಗಲಿಕ್ಕೆ ಕಾರಣವಾದರೂ ಏನು ?

ಆ ಕಾಲಕ್ಕೆ ಮಣಿಲಾಲನ ಶರೀರವು: ಥರಥರನೆ ಒಂದೇಸವನೆ ನಡು ಗುತ್ತಿತ್ತು. ಅವನು ದೈನ್ಯಾವಸ್ಥೆಯಿಂದ ಆ ಪೆಟ್ಟಿಗೆಯ ಕಡೆಗೆ ನೋಡಿ— ನಾನೆಂದಿಗೂ ತಪ್ಪಿರುವದಿಲ್ಲ. ನಿಜವಾಗಿಯೂ ಆ ಪೆಟ್ಟಿಗೆಯನ್ನೇ ಕೊಟ್ಟಿ ರುವೆನು. ಆದರೆ ಇದರೊಳಗಿನ ಆಭರಣಗಳು ಮಾತ್ರ ಕಳವಾಗಿ ಹೋಗಿ ರುವದೇ ನಿಶ್ಚಯ ! ಹಾಯ್ ! ಹಾಯ್ ! ದೇವಾ, ನನ್ನ ಮೇಲೆ ಇಷ್ಟೇಕೆ ಕೋಪಿಸಿದೆ? ನನ್ನ ಸರ್ವಸ್ವವೂ ಘಾತವಾಗಿ ಹೋಯಿತಲ್ಲ ! ಇನ್ನು ನನ್ನದೇನು ಉಳಿಯಿತು ?

ಹೀಗೆ ನುಡಿದ ಮಣಿಲಾಲನ ದೈನ್ಯೋಕ್ತಿಗಳನ್ನು ಕೇಳಿ, ಅಲ್ಲಿದ್ದವ ರೆಲ್ಲರೂ ಒಂದು ಬಗೆಯ ಭ್ರಾಂತರಂತೆ ಸುಮ್ಮನೆ ನಿಂತುಕೊಂಡುಬಿಟ್ಟರು! ಬಾಬೂರಾಯನು ಉತ್ಸುಕತೆಯಿಂದ ಪೆಟ್ಟಿಗೆಯನ್ನು ತಕ್ಕೊಂಡು ಅದನ್ನು ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದನು. ಆಗ ಅದರಲ್ಲಿ ಒಂದು ಮಗ್ಗಲಿಗೆ ಒಂದು ಕಾಗದದ ಚೂರು ಕಂಡು ಬಂತು. ಕೂಡಲೆ ಅವನು ಅದನ್ನು ಹೊರಗೆ ತೆಗೆದು ನೋಡುತ್ತಾನೆ ! ಅದರಲ್ಲಿ ಈ ಪ್ರಕಾರ ಬರೆದಿತ್ತು—

ಒಡವೆಯು ಕೈಸೇರಿತು. ಯಾವ ತರದ ವಿಘ್ನವೂ ಉಂಟಾಗಲಿಲ್ಲ. ನಿಮ್ಮಿಂದ ನನಗೇನೂ ಅಡ್ಡಿಯಾಗದಿದ್ದದ್ದಕ್ಕೆ ನಾನು ನಿಮ್ಮ ಆಭಾರ ಮನ್ನಿಸುವೆನು.

ಬಹಾದ್ದರ

ಬಾಬೂರಾಯನು ದಂಗು ಬಡೆದು ನಿಂತನು ! ಇಂಥ ಲೋಕವಿಚಿ ತ್ರವಾದ ಸಂಗತಿಯನ್ನು ಅವನು ಈ ಮೊದಲೆಂದೂ ಕಂಡಿರಲಿಲ್ಲ. ಆಭರ

ಣಗಳಂತೂ ಕಳವಾಗಿ ಹೋದವು. ಅದ್ಭುತ ಕರ್ಮಕುಶಲನಾದ ಆ ಬಹಾದ್ದರನೇ ಇಂಥ ಅಸಾಧ್ಯ ಕಾರ್ಯ ಸಾಧಿಸಿರುವನೆಂಬದಕ್ಕೆ ಇಷ್ಟೇ ಪ್ರಮಾಣ ಸಾಕಾಗಿರುವದು. ಇದರ ಮರ್ಮವು ಮಾನವೀಬುದ್ಧಿಗೆ ನಿಲುಕದಾಗಿದೆ. ಸುಮಾರು ಒಂದು ತಾಸಿನ ಪೂರ್ವದಲ್ಲಿ ಆ ಆಭರಣಗಳು ಈ ಪೆಟ್ಟಿಗೆಯಲ್ಲೇ ಇದ್ದವು. ಮಣಿಲಾಲನು ನಮ್ಮೆಲ್ಲರಿಗೆ ಅವುಗಳನ್ನು ತೋರಿಸಿ ಅವುಗಳನ್ನು ಎಲ್ಲರ ಸಮಕ್ಷನು ಈ ಪೆಟ್ಟಿಗೆಯಲ್ಲಿ ಹಾಕಿ, ಆ ಕಪಾಟನಲ್ಲಿಟ್ಟು ಕೀಲೀ ಹಾಕಿದ್ದನು.

ಮುಂದೆ ಲಿಲಾವು ಪೂರ್ಣವಾದ ಬಳಿಕ ಆ ತಿಜೋರಿಯ ಕೀಲಿಯನ್ನು ತೆರೆದು, ಮತ್ತೆ ಯಾರ ಕೈಯಲ್ಲಿಯೂ ಕೊಡದೆ, ಮಾರಲಿಕ್ಕೆ ತೆಗೆದುಕೊಂಡ ಪೋಪಟಲಾಲನ ಕೈಯಲ್ಲಿಯೇ ಕೊಟ್ಟನು. ಕೂಡಲೆ ಆ ಗೃಹಸ್ಥನು ಎಲ್ಲರ ಸಮಕ್ಷಮವೇ ಆ ಪೆಟ್ಟಿಗೆಯ ಬಾಯಿ ತೆರೆಯಲು, ಒಳಗೆ ಆಭರಣಗಳಿರಲಿಲ್ಲ! ಅಂದಮೇಲೆ ಇದಕ್ಕಿಂತ ಅದ್ಭುತ ಚಮತ್ಕಾರವು ಈ ಜಗತ್ತಿನಲ್ಲಿ ಅನ್ಯದಾವುದಿರುವದು?

ಇತ್ಯಾದಿ ಸಂಗತಿಗಳನ್ನು ಕುರಿತು ಬಾಬೂರಾಯನು ವಿಚಾರಿಸುತ್ತಿರಲು, ಇತ್ತ ಇನಸ್ಪೆಕ್ಟರನ ಕೈಗೆ ರಬ್ಬರಿನಿಂದ ಮುದ್ರಿತವಾದ ಆ ಸಣ್ಣ ಪತ್ರವು ಸಿಗಲು ಅದನ್ನು ನೋಡಿಕೊಂಡು ಅವನು ಒಮ್ಮೆಲೆ ಕಳವು! ಕಳವು! ಆಭರಣಗಳು ಕಳವಾದವು. ಆ ಬಹಾದ್ದರನೇ ಕಳವು ಮಾಡಿದನು, ಎಂದು ಗಟ್ಟಿಯಾಗಿ ಕೂಗಿದನು. ಅದರಿಂದ ಬಾಬೂರಾಯನ ವಿಚಾದಲ್ಲಿ ಬದಲಾಯಿತು. ಅವನು ಒಮ್ಮೆಲೆ ಎದ್ದು ನಿಂತು, ಕಾವಲಿನ ಪೋಲೀಸ ಸಿಪಾಯಿಗೆ:—ಈ ಕೋಣೆಯ ಬಾಗಿಲನ್ನು ಮುಚ್ಚಿ ಬಿಡು, ಎಂದು ಅಪ್ಪಣೆ ಮಾಡಲು, ಅದರಂತೆ ಅವನು ಕದಗಳನ್ನು ಮುಚ್ಚಿ, ಅದಕ್ಕೆ ಬೆನ್ನು ಆನಿಸಿ ನಿಂತುಕೊಂಡನು; ಆ ಇಬ್ಬರು ಡಿಟೆಕ್ಟಿವ್ಹರು ಎಡಬಲಗಳಲ್ಲಿ ನಿಂತರು.

ಬಾಗಿಲು ಮುಚ್ಚಿದ ಕೂಡಲೆ ಒಳಗಿರುವ ಪ್ರೇಕ್ಷಕ ಜನರೂ, ಗ್ರಾಹಕ ಜನರೂ ಗಾಬರಿಯಾದರು. ಇದೇನು ವಿಚಿತ್ರ ಪ್ರಕಾರ! ಇದರ ಗೂಢವೇನಿರಬಹುದು? ಎಂದು ಅಲ್ಲಿ ನೆರೆದವರೆಲ್ಲರೂ ತಮ್ಮ ತಮ್ಮೊಳಗೆ-ತಮಗೆ ತಿಳಿದಂತೆ ಆಲೋಚಿಸಹತ್ತಿದರು. ಇಂಥ ಬಿಕ್ಕಟ್ಟಿನ ಸ್ಥಳದಲ್ಲಿ ಬಂದು

ಮಾತಾಡದೆ ನಿಂತುಕೊಂಡಿದ್ದರು. ಬಾಬೂರಾಯನು ತೀಕ್ಷ್ಣದೃಷ್ಟಿಯಿಂದ ಅವರೆಲ್ಲರ ಕಡೆಗೆ ನೋಡಹತ್ತಿದನು. ಅವರಲ್ಲಿ ಯಾರೂ ಸಾಮಾನ್ಯ ಜನರಿದ್ದಿಲ್ಲ. ದೊಡ್ಡ ದೊಡ್ಡ ವ್ಯಾಪಾರಸ್ಥರೂ, ಕೋಟ್ಯಾಧೀಶರಾದ ಸಾವುಕಾರರೂ, ಕೌನ್ಸಿಲ್ ಸಭಾಸದರೂ ಮೊದಲಾದವರಿದ್ದರು. ಇಂಥವರ ಮೇಲೆ ಸಂಶಯ ತಕ್ಕೊಳ್ಳುವದು ಹೇಗೆ? ಇಂಥ ಜನರಲ್ಲಿ ಸಂಶಯ ತೆಗೆದುಕೊಳ್ಳುವದೆಂದರೆ, ಸ್ವತಃ ನನ್ನಲ್ಲಿಯೂ ಸಂಶಯ ಕಲ್ಪಿಸಿದಂತೆಯೇ ಸರಿ.

ಏನೇ ಆಗಲಿ, ಅಮೂಲ್ಯ ವಸ್ತುವು ಕಳವಾಗಿ ಹೋಗಿರುವದು ನಿಜ. ಅದನ್ನು ಬಹಾದ್ದರನೇ ಕದ್ದಿರುವನೆಂಬುದಕ್ಕೆ ಸ್ವತಃ ಬರೆದಿಟ್ಟಿರುವ ಅವನ ಪತ್ರವೇ ಸಾಕ್ಷಿ; ಆದರೆ ಅವನನ್ನು ಹಿಡಿಯುವ ಬಗೆ ಹೇಗೆ? ಅವನಂತೂ ನಮಗೆ ತಿಳಿಸಿದಂತೆ ತನ್ನ ಕಾರ್ಯ ಸಾಧಿಸಿಕೊಂಡು ಜಯಶಾಲಿಯಾದನು. ಇದರಿಂದ ನನಗಾದ ಅಪಮಾನವು ಅಸಹ್ಯವಾಗಿರುವದು, ಎಂದು ಬಾಬೂರಾಯನು ಚಿಂತಾತುರತೆಯಿಂದ ನುಡಿದನು.

ಆ ಅಲಂಕಾರಗಳು ಕಳವಾಗಿಯೇ ಹೋಗಿವೆಯೆಂದು ನಿಮ್ಮ ಮನಸ್ಸಿಗೆ ಸಂಪೂರ್ಣ ಭರವಸೆಯುಂಟಾಗಿರುವದೋ? ಎಂದು ಪೋಪಟಲಾಲನು ಬಾಬೂರಾಯನನ್ನು ವಿಚಾರಿಸಿದನು.

ಬಾಬೂರಾವ—ಇಲ್ಲೆನ್ನಲಿಕ್ಕೆ ಬರುವಂತಿಲ್ಲ. ಯಾವ ಕಳ್ಳನು ಈ ವಸ್ತುಗಳನ್ನು ಕಳವು ಮಾಡಿರುವನೋ, ಅವನಂಥ ಧೂರ್ತನೂ ಕುಶಲನೂ ನಮ್ಮ ಭರತಖಂಡದಲ್ಲಿ ಬೇರೊಬ್ಬನಿಲ್ಲ. ಅವನ ಸಾಮರ್ಥ್ಯವು ಅಗಾಧವಾದದ್ದು. ಅವನು ಅಸಾಧ್ಯವಾದ ಕೆಲಸಗಳನ್ನು ಸಾಧ್ಯವಾಗಿ ಮಾಡಿ ತೋರಿಸಿರುವನು. ಅಂತೆಯೇ ಇಂಥ ಪ್ರತಿಬಂಧದೊಳಗಿಂದ ಭದ್ರವಾದ ತಿಜೋರಿಯಲ್ಲಿಯ ಆಭರಣಗಳು ಅಪಹರಿಸಲ್ಪಟ್ಟಿವೆ, ಇಷ್ಟೇ ಅಲ್ಲ. ಅದರಂತೆ ಅವನು ಮುಂದಾಗಿ ನನಗೆ ತಿಳಿಸಿದ್ದರಿಂದ, ನಾನು ಅವನನ್ನು ಹಿಡಿಯುವದಕ್ಕೆಂದೇ ಇಲ್ಲಿಗೆ ಬಂದಿದ್ದು, ನನ್ನ ಸಾಹಸವೆಲ್ಲ ಈಗ ವ್ಯರ್ಥವಾಯಿತು! ಏನು ಮಾಡಲಿ? ಎಂದು ನುಡಿದು ನಿಟ್ಟುಸಿರು ಬಿಟ್ಟನು.

ಎಂಥ ಭಯಂಕರ ಸಾಹಸಿ ಕಳ್ಳನವನು! ಬಾಬೂರಾವ, ಹೇಗಾದರೂ ಮಾಡಿ, ಆ ಆಭರಣಗಳನ್ನು ಶೋಧಿಸಲಿಕ್ಕೇ ಬೇಕು. ನನಗೆ ಅವು

ಗಳ ಅವಶ್ಯಕತೆಯು ಹೆಚ್ಚಾಗಿದೆ. ನಿಮ್ಮ ಚಾತುರ್ಯದಿಂದ ನೀವು ಅವು ಗಳನ್ನು ದೊರಕಿಸಿ ಕೊಟ್ಟರೆ, ನಿಮಗೆ ೧೫ ಸಾವಿರ ಪೌಂಡು ಇನಾಮು ಕೊಡುವೆನೆಂದು ಪೋಪಟಲಾಲ ನುಡಿದನು.

ಇದೇ ವೇಳೆಯಲ್ಲಿ ಮಣಿಲಾಲನು ಅತಿ ದೀನಸ್ವರದಿಂದ—ನಾನಾದರೂ ೧೫ ಸಾವಿರ ಪೌಂಡುಗಳನ್ನು ಇನಾಮಾಗಿ ಕೊಡುವೆನು. ಆ ಅಲಂಕಾರ ಗಳು ದೊರೆಯದಿದ್ದರೆ, ಜನರಲ್ಲಿ ನನ್ನ ಪತ್ತುಗೇಡಾಗುವದು. ನನ್ನ ಮಾನ-ಮರ್ಯಾದೆಗಳೂ ಉಳಿಯಲಾರವು. ಈ ಪ್ರಕಾರ ಜೀವಿಸುವದ ಕ್ಕಿಂತ, ನನಗೆ ಸಾವು ಬಂದರೆ ಕೆಡಕೇನು? ಆದಕಾರಣ ಬಾಬೂರಾವ, ಈ ಮುಂಬೈ ಪಟ್ಟಣದಲ್ಲಿ ನಿಮ್ಮಷ್ಟು ಪ್ರಸಿದ್ಧರಾದ ಡಿಟೆಕ್ಟಿವ್ಹರು ಬೇರೆ ಯಾರಿರುವರು? ಇನಸ್ಪೆಕ್ಟರಸಾಹೇಬರ ಸಹಾಯದಿಂದ ನೀವು ಈ ಕಾರ್ಯ ವನ್ನು ಕೊನೆಗಾಣಿಸಿದ್ದೇ ಆದರೆ, ಅವರಿಗಾದರೂ ನಾನು ದೊಡ್ಡ ಇನಾಮು ಕೊಡುವೆನು. ಇಷ್ಟೇ ಅಲ್ಲ, ನನ್ನ ವಸ್ತುಗಳು ನನ್ನ ಕೈಸೇರಿದರೆ, ಇಲ್ಲಿ ರುವ ಎಲ್ಲ ಪೋಲೀಸ ಜನರನ್ನೂ ಸಂತುಷ್ಟಗೊಳಿಸುವೆನು.

ಎಷ್ಟೋ ಹೊತ್ತಿನವರೆಗೆ ಬಾಬೂರಾಯನು ಏನೂ ಮಾತಾಡಲಿಲ್ಲ. ಶೂನ್ಯದೃಷ್ಟಿಯಿಂದ ಆ ಪೆಟ್ಟಿಗೆಯ ಕಡೆಗೆ ನೋಡುತ್ತ ನಿಂತುಕೊಂಡನು. ಎಲ್ಲರೂ ಅವನ ಕಡೆಗೇ ನೋಡುತ್ತ ನಿಂತುಕೊಂಡಿದ್ದರು. ಆಗ ಒಂದು ದೀರ್ಘವಾದ ಉಚ್ಛ್ವಾಸವನ್ನು ಬಿಟ್ಟು, ಬಾಬೂರಾಯನು:—ಈ ಆಭರ ಣಗಳನ್ನು ಶೋಧಿಸುವೆನು, ನಿಜವಾಗಿಯೂ ಶೋಧಿಸುವೆನು; ಇದು ನನ್ನ ಕರ್ತವ್ಯವೇ ಆಗಿದೆ; ನಿಮ್ಮ ಇನಾಮಿನ ಆಶೆಗಾಗಿ ಮಾಡತಕ್ಕ ಕೆಲಸವಲ್ಲ! ಇದರಲ್ಲಿ ನಾನು ಮನಸು ಮಾಡಿದರೆ. ನನ್ನ ಹಾಗು ನನ್ನ ಖಾತೆಯ ಮಾನ ಮರ್ಯಾದೆಗಳೇ ಉಳಿಯಲಾರವು. ಬಹಾದ್ದರನು ನಮ್ಮೆಲ್ಲರ ಎದುರಿನಲ್ಲೇ ಇಂಥ ಸಾಹಸ ಮಾಡಿ ನಮ್ಮನ್ನು ಅಪಮಾನಗೊಳಿಸಿರುವನು. ಅದಕ್ಕಾಗಿ ಅವನನ್ನು ಹಿಡಿಯುವವರೆಗೂ ನಮ್ಮ ಅಪಮಾನವು ತುಂಬಿ ಬರುವಂತಿಲ್ಲ. ಈ ಕಠಿಣ ಕೆಲಸವನ್ನು ಬೇರೆ ಯಾರಾದರೂ ಮಾಡಿ ಕೊಟ್ಟರೆ ಅವರಿಗೆ ನಾನೂ ಸಹ ಇನಾಮು ಕೊಡಲಿಕ್ಕೆ ಸಿದ್ಧನಿರುವೆನು.

ಪೋಪಟಲಾಲ:—ತಮ್ಮ ಮಾತಿನಿಂದ ನನಗೆ ಬಹಳ ಸಮಾಧಾನ

ವೆನಿಸಿದೆ. ನೀವಂತೂ ಮನಃಪೂರ್ವಕವಾಗಿ ಪ್ರಯತ್ನ ಮಾಡಿಯೇ ಮಾಡು ವಿರಿ ! ಇದರಲ್ಲೇನೂ ಸಂಶಯವಿಲ್ಲ. ಇನ್ನು ನಿಮ್ಮ ಪ್ರಯತ್ನಕ್ಕೆ ಯಶ ದೊರೆಯದಿದ್ದರೆ, ಅದು ನಮ್ಮ ದುರ್ದೈವವೆಂದೇ ತಿಳಿಯುವೆವು.

ಅಲ್ಲಿದ್ದ ಆ ಇಬ್ಬರು ಇನಸ್ಪೆಕ್ಟರರಿಗೆ ಮಾತ್ರ ಈ ಕಾರ್ಯದಲ್ಲಿ ಯಶ ಸಿಗುವದಿಲ್ಲೆಂದು ಭರವಸೆಯಾಗಿ ಹೋಯಿತು. ಫೋಟೊನಂತೂ ಏನೂ ಮಾತಾಡದಾದನು. ಬಾಬೂರಾಯರ ಸಾಮರ್ಥ್ಯದ ಬಗ್ಗೆ ಅವನಿಗೆ ವಿಶ್ವಾಸವಿತ್ತು; ಆದರೆ ಬಹಾದ್ದರನು ಸಾಮಾನ್ಯನಲ್ಲವೆಂಬುದೂ ಅವನಿಗೆ ಗೊತ್ತಾದ್ದರಿಂದ, ಏನೇನಾಗುವದೋ ಸುಮ್ಮನೆ ನಿಂತು ನೋಡುವದೇ ಒಳ್ಳೇದೆಂದು ಕೊಂಡು ಅವನು ಸುಮ್ಮನಿದ್ದನು.

ಇನಸ್ಪೆಕ್ಟರ ಭವಾನರಾಯನಿಗೆ ಮಾತ್ರ ಆ ಆಭರಣಗಳು ಕಳವಾಗಿ ಹೋದದ್ದು ನಿಜವೆನಿಸಲೊಲ್ಲದು. ಅವನು ಮಣಿಲಾಲನಿಗೆ:—ಜನರ ಗೊಂದಲದಲ್ಲಿ ಕಪಾಟಿನಿಂದ ಹೊರಗೆ ತೆಗೆಯುವಾಗ ಪೆಟ್ಟಿಗೆಯು ಬದಲಾದರೂ ಆಗುವ ಸಂಭವವಿದೆ. ಕಾರಣ ಇನ್ನೊಮ್ಮೆ ಸಾವಧಾನದಿಂದ ನಿಮ್ಮ ಕಪಾಟು ಶೋಧಿಸಿರಿ. ಅವು ಕಳವಾಗಿ ಹೋಗುವದು ನನಗಂತೂ ಶಕ್ಯವಾಗಿ ಕಾಣಿಸುವದಿಲ್ಲ. ಎಂದನು.

ಆಗ ಮಣಿಲಾಲನು ನಕಾರಾರ್ಥವಾಗಿ ತಲೆಯಲ್ಲಾಡಿಸುತ್ತ ಕರುಣಾಸ್ವರದಿಂದ--ಇಲ್ಲ ! ಇಲ್ಲ ! ನನ್ನಿಂದ ಸ್ವಲ್ಪೂ ವಿಸ್ಮರಣೆಯಾಗಿರುವದಿಲ್ಲ. ಆ ಆಭರಣಗಳು ನಿಜವಾಗಿಯೂ ಈ ಪೆಟ್ಟಿಗೆಯಲ್ಲೇ ಇದ್ದವು. ಹೀಗಿದ್ದು ಸುಮ್ಮನೆ ಕಪಾಟು ಶೋಧಿಸುವದರಲ್ಲಿ ಅರ್ಥವೇನು ? ಎಂದು ನುಡಿದನು.

ಅವನ ಮಾತುಗಳು ಬಾಬೂರಾಯನಿಗೆ ದಿಟವಾಗಿ ಕಂಡವು. ಕಾರಣ ಅವನು:—ಇನಸ್ಪೆಕ್ಟರ ಸಾಹೇಬ, ಮಣಿಲಾಲರ ಮಾತು ನಿಜವಿದೆ. ಇಕೋ, ನೋಡಿರಿ; ಇದಕ್ಕಿಂತ ಹೆಚ್ಚಿನ ಪುರಾವೆಯು ಬೇರೆ ಯಾವದಿದೆ ? ಎಂದು ಪೆಟ್ಟಿಗೆಯಲ್ಲಿ ದೊರೆತ ಬಹಾದ್ದರನ ಸಣ್ಣ ಪತ್ರವನ್ನು ಅವನಿಗೆ ತೋರಿಸಿದನು.

ಇನಸ್ಪೆಕ್ಟರ:—ಮಾಲು ಕಳವಾಗಿರುವದೇನೋ ನಿಜ; ಆದರೆ ಅದು

ಈ ಸ್ಥಳವನ್ನು ಬಿಟ್ಟು ಮಾತ್ರ ಹೋಗಿರುವದಿಲ್ಲ. ಯಾರಾದರೂ ಅವನ್ನು ಬಚ್ಚಿಟ್ಟುಕೊಂಡಿರಲಿಕ್ಕೇಬೇಕು. ಒಬ್ಬ ಮನುಷ್ಯನಾದರೂ ಈ ಕೋಣೆಯಿಂದ ಹೊರಗೆ ಹೋಗಿರುವದಿಲ್ಲ. ಅಂದ ಬಳಿಕ ಬಹಾದ್ದರನಾದರೂ ಇವರಲ್ಲಿಯೇ ಇರಲಿಕ್ಕೆ ಬೇಕು; ಆದರೆ ಅವನು ಯಾರೆಂಬದು ಮಾತ್ರ ಇದುವರೆಗೂ ತಿಳಿಯಲಿಲ್ಲ. ಕಾರಣ ಈಗ ಇಲ್ಲಿದ್ದವರೆಲ್ಲರ ಅಂಗಝಡತಿ ಮಾಡುವದೇ ಉತ್ತಮ ಉಪಾಯವು. ಯಾಕೆ ಬಾಬೂರಾವ, ಮಾಲು ಕಳವಾಗಿರುವದು ನಿಜವಷ್ಟೆ? ಆ ಮಾತಿಗೆ ಇನ್ನೂ ಒಂದು ತಾಸು ಕೂಡ ಆಗಿರುವದಿಲ್ಲ. ಕಳವು ಮಾಡಿದವನು ಒಪ್ಪಿಕೊಂಡ ಲೇಖೀ ಇದೆ. ಅಂದ ಮೇಲೆ ಬಹಾದ್ದರನು ನಿಜವಾಗಿಯೂ ಇಲ್ಲಿಯೇ ಇರುವನು. ಇದರಲ್ಲಿ ನನಗಂತೂ ಎಳ್ಳಷ್ಟೂ ಸಂಶಯ ತೋರುವದಿಲ್ಲ! ಎಂದು ಸ್ಪಷ್ಟರೀತಿಯಿಂದ ಮಾತಾಡಿದನು.

ಕೂಡಿದ ಜನರನ್ನು ನೋಡಿ, ಇನಸ್ಪೆಕ್ಟರನ ಮಾತಿಗೆ ಸಮ್ಮತಿಕೊಡಲು ಮಣಿಲಾಲನಿಗೆ ಧೈರ್ಯವಾಗಲೊಲ್ಲದು. ಮಣಿಲಾಲನ ಅಂಗಡಿಗೆ ಹೋಗಿ ಸುಮ್ಮನೆ ಅವಮಾನಿತರಾಗಿ ಬಂದೆವಲ್ಲ! ಎಂದು ದೊಡ್ಡ ದೊಡ್ಡ ಸಭ್ಯ ಗೃಹಸ್ಥರು ನೊಂದುಕೊಂಡರೆ, ತನ್ನ ವ್ಯಾಪಾರಕ್ಕೆ ತೊಂದರೆಯೊದಗಬಹುದೆಂದು ಆತನು ಯೋಚಿಸಿದನು. ಒಂದು ಬಗೆಯಿಂದ ಆಲೋಚಿಸಿದರೆ, ಇಂಥ ದೊಡ್ಡ ಬೆಲೆಯ ಆಭರಣವು ಸುಮ್ಮನೆ ಕೈ ಬಿಡುವದಲ್ಲ - ಎಂಬ ಬೇರೊಂದು ಆಲೋಚನೆಯೂ ಮುಂದೆ ಬಂದು ನಿಲ್ಲುವದು. ಹೀಗಾಗಿ ಯಾವ ಬಗೆಯ ಅಭಿಪ್ರಾಯ ಕೊಡಲಿಕ್ಕೂ ತಿಳಿಯದೆ ಮಣಿಲಾಲನು ಹತಾಶನಾಗಿ ಕುಳಿತುಕೊಂಡನು.

ಇನ್ನು ನಾನು ಮಾಡತಕ್ಕ ಕೆಲಸದಲ್ಲಿ ಮನಸರಿ ಮಾಡಲಿಕ್ಕಾಗದು. ಪ್ರತಿಯೊಬ್ಬರನ್ನು ಸಂಪೂರ್ಣವಾಗಿ ಶೋಧಿಸಲೇಬೇಕು. ಯಾರು ನಿರಪರಾಧಿಯಿರುವರೋ, ಅವರಿಗೆ ಇದರಿಂದೇನೂ ಅವಮಾನವೆನಿಸುವದಿಲ್ಲ. ಚೆನ್ನಾಗಿ ಆಲೋಚಿಸಿವರೆ, ನ್ಯಾಯ ಸಮರ್ಥನೆಗೆ ಸಹಾಯ ಮಾಡಿದ ಶ್ರೇಯಸ್ಸು ಅವರಿಗೆ ಬರುವದು, ಎಂದು ಬಾಬೂರಾಯನು ಗಂಭೀರ ಸ್ವರದಿಂದ ನುಡಿದನು.

ಬಾಯಿಂದ ಈ ಪ್ರಕಾರ ಮಾತಾಡಿದಾಗ್ಯೂ ಅಂತರಂಗದಲ್ಲಿ ಬಾಬೂ

ರಾಯನಿಗೆ ಈ ಬಗೆಯ ಶೋಧದಿಂದ ಏನೂ ಪ್ರಯೋಜನವಿಲ್ಲೆಂದು ತಿಳಿದಿತ್ತು. ಯಾಕಂದರೆ ಯಾವನು ನಿರ್ವಿಘ್ನದಿಂದ ಆಭರಣಗಳನ್ನು ಎಬ್ಬಿಸಿದ್ದನೋ, ಅವನಿಗೆ ಇಲ್ಲಿಂದ ಪಾರಾಗಿ ಹೋಗಲಿಕ್ಕಾಗಲಿ ಅಥವಾ ಆ ಆಭರಣಗಳನ್ನು ದಾಟಿಸಲಿಕ್ಕಾಗಲಿ ಏಕೆ ಬರಲಿಕ್ಕಿಲ್ಲ ? ಎಂದು ಒಮ್ಮೊಮ್ಮೆ ಅನಿಸುತ್ತಿತ್ತು.

ಇನಸ್ಪೆಕ್ಟರ ಸಾಹೇಬರು ಮೇಜಿನ ಹತ್ತರ ಹೋಗಿ ನಿಂತುಕೊಂಡು ಅದನ್ನು ದೊಪ್ಪನೆ ಅಪ್ಪಳಿಸಿ, ಎಲ್ಲರ ಕಡೆಗೂ ಅಧಿಕಾರಯುಕ್ತ ಮುದ್ರೆಯಿಂದ ನೋಡತೊಡಗಿದನು ; ಮತ್ತು ಗಂಭೀರ ಸ್ವರದಿಂದ ನುಡಿದದ್ದೇನಂದರೆ:—ಈಗ ಕಳವಾದ ಮಾಲು ಇನ್ನೂ ಈ ಕೋಣೆಯಿಂದ ಹೊರಗೆ ಹೋಗಿರಲಾರದು; ಆದಕಾರಣ ಇಲ್ಲಿ ಕೂಡಿದ ಪ್ರತಿಯೊಬ್ಬರೂ ತಮ್ಮ ಅಂಗಝಡತಿಯನ್ನು ನನಗೆ ಮಾಡಗೊಡಬೇಕು. ಹಾಗೆ ಮಾಡಲಿಕ್ಕೆ ನನಗೆ ಸಂಪೂರ್ಣ ಅಧಿಕಾರವಿರುತ್ತದೆ. ಇದರಿಂದ ನೀವು ಅವಮಾನಿತರಾಗಲಿ, ಅಸಂತುಷ್ಟರಾಗಲಿ ಆಗಲಿಕ್ಕಿಲ್ಲೆಂದು ನನ್ನ ನಂಬಿಕೆ. ಯಾವ ಪದಾರ್ಥವು ಒಂದು ಲಕ್ಷ ಹತ್ತುಸಾವಿರ ಪೌಂಡು ಬೆಲೆಗಂಡಿರುವದೋ, ಅಂಥ ಮಹತ್ವದ ಮಾಲಿನ ಶೋಧವನ್ನು ಎಷ್ಟು ಜಾಗರೂಕತೆಯಿಂದ ಮಾಡಬೇಕಾಗಿರುವದೆಂಬದನ್ನು ನಾನೇನೂ ತಮಗೆ ಹೊಸದಾಗಿ ಹೇಳಬೇಕಾಗಿರುವದಿಲ್ಲ.

ಈ ಪ್ರಕಾರ ಇನಸ್ಪೆಕ್ಟರನ ಭಾಷಣವು ನಡೆದಿರಲು, ಇತ್ತ ನೆರೆದ ಜನರಲ್ಲಿ ಗಲಭೆಗೆ ಪ್ರಾರಂಭವಾಯಿತು. ಹೀಗೆ ಮಾಡುವದು ಅತ್ಯಂತ ಅಪಮಾನಕಾರಕವೆಂದು ಪ್ರತಿಯೊಬ್ಬನೂ ಅಭಿಪ್ರಾಯಪಡಹತ್ತಿದನು. ರತ್ನಗಳ ಪ್ರಸಿದ್ಧ ವ್ಯಾಪಾರಿಯಾದ ಜವಾಹಿರಲಾಲನು ಅಸಂತೋಷದಿಂದ:—ನನ್ನನ್ನು ಕಳ್ಳನೆಂದು ಯಾರೂ ಅನ್ನಲಾರರೆಂದು ಖಾತ್ರೀಪೂರ್ವಕವಾಗಿ ಹೇಳುತ್ತೇನೆ. ಹೀಗೆ ಖಾತ್ರಿ ಇರುವವರೆಲ್ಲರ ಅಂಗಝಡತಿ ಮಾಡುವದು ಅತ್ಯಂತ ಅಪಮಾನಕರವು. ನಿಮ್ಮ ಈ ಕೃತಿಯು ಯಾರ ಮನಸ್ಸಿಗೂ ಬರುವದಿಲ್ಲ. ನೀವೇ ನೋಡಿರಿ; ನಾನು ಆ ಅಲಂಕಾರವನ್ನು ಮುಟ್ಟಿಲ್ಲ ಸಹ. ಹೀಗಿದ್ದು, ಕಳ್ಳನಂತೆ ಶೋಧಿಸಿಕೊಳ್ಳಬೇಕೆಂದರೆ, ಪರಮ ಸೋಜಿಗವಲ್ಲವೆ ! ಯಾಕೆ ಶೇಟ, ನಿಮ್ಮ ಅಭಿಪ್ರಾಯವೇನು ? ನೀವು ನನ್ನ ಹತ್ತರವೇ ನಿಂತುಕೊಂಡಿ

ದ್ದಿರಲ್ಲವೇ? ಎಂದು ಅಲ್ಲಿ ಸಮೀಪದಲ್ಲಿ ನಿಂತಿದ್ದ ಒಬ್ಬ ಸಭ್ಯ ಗೃಹಸ್ಥನನ್ನು ಕೇಳಿದನು.

ನಿಜವಿದೆ! ನಾನಾದರೂ ಆ ಆಭರಣವೆಂಥದೋ ಕಂಡಿರುವದಿಲ್ಲ. ಸುಮ್ಮನೆ ಇಲ್ಲಿಗೆ ಬಂದು ಇಷ್ಟೊತ್ತಿನವರೆಗೆ ವ್ಯರ್ಥ ವೇಳೆ ಕಳೆದು, ಕಡೆಗೆ ಬರಿಗೈಯಿಂದ ಮನೆಗೆ ಹೋದೇವೆಂದರೆ, ಮೇಲೆ ಕಳವಿನ ಆರೋಪ ಹೊತ್ತುಕೊಂಡು ಹೋಗಬೇಕಾಗಿದೆ! ಇದಕ್ಕಿಂತ ಹೆಚ್ಚಿನ ದುರ್ದೈವಿಗಳು ಯಾರಾದರೂ ಇರಬಹುದೇ! ಯಾವ ಸ್ಥಳದಲ್ಲಿ ಸಭ್ಯ ಗೃಹಸ್ಥರಿಗೆ ಕಳ್ಳರೆನ್ನುವರೋ, ಅಂಥ ಸ್ಥಳಕ್ಕೆ ಹೋಗದಿರುವದೇ ಲೇಸು, ಎಂದು ಆ ಸಭ್ಯಗೃಹಸ್ಥನು ನುಡಿಯಲು, ನೀವನ್ನುವದು ಸತ್ಯವೆಂದು ಅಲ್ಲಿ ನೆರೆದವರೆಲ್ಲರೂ ಏಕವಾಕ್ಯತೆಯಿಂದ ಸಮರ್ಥಿಸಿದರು.

ಇನಸ್ಪೆಕ್ಟರರ ಮಾತಿನಂತೆ ಈಗಲೇ ಮಾಡಹೋದರೆ, ಬಹಳ ಗೊಂದಲವೇಳುವ ಸಂಭವವಿದೆ! ಕಾರಣ ಈ ಜನರಿಗೆ ಇನ್ನೆರಡು ಸಾಮೋಚಾರದ ಮಾತುಗಳನ್ನು ಹೇಳಿ ನೋಡುವಾ, ಎಂದು ಬಾಬೂರಾಯನು ಅಲ್ಲಿ ನೆರೆದ ಜನರನ್ನು ಕುರಿತು— ಸಭ್ಯ ಗೃಹಸ್ಥರೇ, ಇನಸ್ಪೆಕ್ಟರ ಸಾಹೇಬರ ಮಾತಿಗೆ ನೀವು ಒಪ್ಪಿಕೊಳ್ಳಬೇಕಾಗಿತ್ತು; ಮಣಿಲಾಲನ ಅಥವಾ ಪೋಲೀಸಿನವರ ಮನಸರಿಯಿಂದ ಈ ಕೆಲಸವಾಗಿರುವದಿಲ್ಲ. ಮಾಲು ಕಳವಾಗಿ ಹೋಗಿರುವದೇನೋ ನಿಜ; ಆದರೆ ಅದನ್ನು ಯಾರು ಕದ್ದರೋ ಗೊತ್ತಾಗುವಂತೆ ಇಲ್ಲ. ಇಂಥ ಪ್ರಸಂಗದಲ್ಲಿ ನಾವೆಲ್ಲರೂ ನಮ್ಮ ನಮ್ಮ ಮೇಲಿನ ಜವಾಬುದಾರಿಯನ್ನು ತಪ್ಪಿಸಿಕೊಳ್ಳುವದಕ್ಕಾಗಿ ಸಿದ್ಧರಾದರೆ ತಪ್ಪೇನು? ಯಾರಾದರೂ ನನ್ನ ಅಂಗಝಡತಿಯನ್ನು ಮಾಡಲಿಕ್ಕೆ ಮುಂದಾದರೆ, ಅದಕ್ಕೆ ನಾನು ಒಂಟಿಗಾಲಿನಿಂದ ಸಿದ್ಧನಿರುವೆನು. ಯಾರು ಕಳವನ್ನೇ ಮಾಡಿರುವದಿಲ್ಲವೋ, ಅವರಿಗೆ ಇದರಿಂದಾಗುವ ಅಪಮಾನವೇನು? ಸಂಶಯಗ್ರಸ್ತರಾಗಿ ಮನೆಗೆ ಹೋಗುವದಕ್ಕಿಂತ, ಅಂಗಝಡತಿಯಿಂದ ನಿರ್ದೋಷಿಗಳಾಗಿ ಮನೆಗೆ ಹೋಗುವದು ಒಳಿತಲ್ಲವೇ?

ಮೊದಲು ಎಲ್ಲರ ವತಿಯಿಂದ ಅಂಗತಪಾಸಣೆಯು ಅಪಮಾನಕರವೆಂದು ಮಾತಾಡಿದ ಗೃಹಸ್ಥನೇ ಈಗ ಮತ್ತೆ ಎದ್ದು ನಿಂತು— ನೀವನ್ನು

ವದೂ ಸತ್ಯವೇ. ನಾವು ಸುಮ್ಮನೆ ಅಡ್ಡಿ ಮಾಡಿದ್ದು ದಡ್ಡತನವು. ಈಗ ನಾವೆಲ್ಲರೂ ಅಂಗತಪಾಸಣೆ ಮಾಡಿಸಿಕೊಳ್ಳಲಿಕ್ಕೆ ಸಿದ್ಧರಿರುವೆವು; ಕಾರಣ ನಮ್ಮ ತಪಾಸಣೆಯ ಕೆಲಸವು ಅವಶ್ಯ ನಡೆಯಲಿ, ಎಂದು ನುಡಿಯಲು, ಅದಕ್ಕೆ ಎಲ್ಲರೂ ಒಪ್ಪಿಕೊಂಡರು; ಇಷ್ಟೇ ಅಲ್ಲ. ಅಂಗತಪಾಸಣೆಗೆ ಅಡ್ಡಿ ಮಾಡುವವರೇ ಕಳ್ಳರೆಂದು ಸಿದ್ಧವಾಯಿತು.

ಆಗ ಇನಸ್ಪೆಕ್ಟರನು— ನಾನಾದರೂ ಇಷ್ಟೇ ಬೇಡುತ್ತಿದ್ದೆನು. ಎಂದು ನುಡಿದವನೇ ಆ ಇಬ್ಬರು ಡಿಟೆಕ್ಟಿವ್ಹರಿಗೆ ಸನ್ನೆ ಮಾಡಲು, ಅವರು ತಪಾಸಣೆಗೆ ಪ್ರಾರಂಭಿಸಿದರು. ಟೊಪ್ಪಿಗೆಯಿಂದ ಬೂಟಿನ ವರೆಗೆ ತಪಾಸು ಮಾಡಿದ್ದಲ್ಲದೆ, ಅಂಗಾಂಗಗಳನ್ನಾದರೂ ಶೋಧಿಸದೆ ಬಿಡಲಿಲ್ಲ; ಆದರೆ ಎಲ್ಲವೂ ವ್ಯರ್ಥ ! ಯಾರ ಬಳಿಯಲ್ಲೂ ಆ ಪದಾರ್ಥ ದೊರೆಯಲಿಲ್ಲ. ಬಳಿಕ ಪೋಪಟಲಾಲನು ತನ್ನ ಡಗಲಿಯನ್ನು ಕಳೆದುಕೊಟ್ಟದ್ದಲ್ಲದೆ, ಉಳಿದ ವಸ್ತ್ರಗಳನ್ನೂ ತೋರಿಸಿದನು; ಮತ್ತು ಆತನು ಹಾಸ್ಯವದನದಿಂದ— ಇದು ಬಲು ಸೋಜಿಗದ ಮಾತಾಯಿತು; ಯಾಕಂದರೆ, ಯಾವನು ಲಿಲಾವಿನಲ್ಲಿ ಆ ಆಭರಣಗಳನ್ನು ಮಾರಲಿಕ್ಕೆ ತಕ್ಕೊಂಡಿರುವನೋ, ಅಲ್ಲದೆ ಅವುಗಳ ಬೆಲೆಯನ್ನು ಸಹ ತುಂಬಿರುವನೋ, ಅಂಥವನೂ ಅವುಗಳನ್ನು ಕಳವು ಮಾಡುವದುಂಟೇ ? ಅವನನ್ನು ಕಳ್ಳನೆಂದು ತಿಳಿಯುವದಾದರೂ ಮೂರ್ಖತನವಲ್ಲವೇ ? ಇನಸ್ಪೆಕ್ಟರ ಸಾಹೇಬ, ನೀವೇ ಆ ಬಹಾದ್ದರನೇಕಾಗಿರಬಾರದು ? ಎಂದು ಒಳ್ಳೇ ನಿಷ್ಠುರದಿಂದ ನುಡಿದನು.

ಆಗ ಇನಸ್ಪೆಕ್ಟರನು— ಏನೂ ಅಡ್ಡಿಯಿಲ್ಲ, ನಮ್ಮ ಅಂಗತಪಾಸಣೆಯೂ ಆಗಿಹೋಗಲಿ ! ಎಂದು ನುಡಿಯಲು, ಮಣಿಲಾಲ, ಬಾಬೂರಾವ, ಇನಸ್ಪೆಕ್ಟರ ಮೊದಲಾದವರೆಲ್ಲರ ಅಂಗಶೋಧನೆಯೂ ಆಯಿತು; ಆದರೂ ಏನೂ ಹೊರಡಲಿಲ್ಲ !

ಈ ಅಂಗಶೋಧನೆಯಿಂದ ಏನೂ ಪ್ರಯೋಜನವಿಲ್ಲೆಂದು ನನಗೆ ಮೊದಲೇ ತಿಳಿದಿತ್ತು; ಆದರೆ ಕರ್ತವ್ಯವೆಂದು ಮಾಡಲೇಬೇಕಾಯಿತು. ಇನ್ನು ಇದರಿಂದ ಸಿದ್ಧವಾದದ್ದೇನಂದರೆ— ಬಹಾದ್ದರನು ಆಭರಣಗಳನ್ನು ಅಪಹರಿಸಿಕೊಂಡು ಇಲ್ಲಿಂದ ಪಾರಾಗಿ ಹೋಗಿರುವನು. ಇದರಲ್ಲೇನೂ ಸಂಶಯವಿಲ್ಲ. ಇನ್ನು ಅವನನ್ನು ಹಿಡಿಯುವದಕ್ಕಾಗಿ ಯಾವ ಆಲೋ

ಚಿನ್ನೆ-ಹಂಚಿಕೆಗಳನ್ನು ಮಾಡಬೇಕಾಯಿತು ? ಎಂದು ಬಾಬೂರಾಯನು ನುಡಿದನು.

ಇಸಸ್ಪೆಕ್ಟರನು ನಿರಾಶನಾಗಿ— ಎಲ್ಲಿಯ ಉಪಾಯ ? ನಮ್ಮ ಉತ್ತರ ಪೂಜೆಯೇ ಆಗಿಹೋಯಿತು ! ಮಂಗಳಾರತಿಯನ್ನಷ್ಟು ಬೆಳಗಿಸಿಕೊಳ್ಳ ಬೇಕಾಗಿದೆ. ಇಲ್ಲಿ ನಾವು ಪ್ರತ್ಯಕ್ಷ ಹಾಜರಿದ್ದು ಏನು ಮಾಡಿದಂತಾ ಯಿತು? ಇನ್ನು ಉಪಾಯಾಂತರಗಳಿಂದ ಹಿಡಿಯುವದಂತೂ ದೂರತೋ ಪಾಸ್ತವೇ ಸರಿ ! ಇದೇನೋ ಅದ್ಭುತ ಪ್ರಸಂಗವಿದೆಯೆಂದು ನಾನು ಮೊದಲೇ ತಿಳಿದಿದ್ದೆನು. ಹಿಮಾಲಯದೊಳಗಿರುವ ಒಬ್ಬ ಮಾಂತ್ರಿಕನ ಯಾವ ವಸ್ತುವನ್ನು ಸ್ಪರ್ಶ ಮಾಡುವನೋ, ಅದು ಕೂಡಲೇ ಇಲ್ಲದಂತಾ ಗುತ್ತಿತ್ತೆಂದು ನಾನು ಒಂದು ಪುಸ್ತಕದಲ್ಲಿ ಓದಿದ್ದೆನು. ಇದು ಅದಕ್ಕೂ ಹೆಚ್ಚಿನ ಆಶ್ಚರ್ಯಕರ ಸಂಗತಿಯಾಗಿದೆ. ಎಂದು ನುಡಿಯಲು, ಬಾಬೂ ರಾಯನು ನಗುತ್ತ— ಏನು ಭವಾನರಾವ, ಹೀಗೇಕೆ ಹುಚ್ಚರ ಹಾಗೆ ಮಾತಾಡುವಿರಿ ? ಕಳವೆಂದರೆ ಜಾದು ಏನು ? ಅದರ ನಿಜವಾದ ಪ್ರಕಾ ರವು ನಮ್ಮ ಬುದ್ಧಿಗೆ ನಿಲುಕದಾಗಿದೆ. ಇದು ನಮ್ಮ ಬುದ್ಧಿ ದೋಷವೇ ಹೊರತು, ಬೇರೊಂದಿಲ್ಲ. ಅದೇ ಬುದ್ಧಿಗೆ ಇನ್ನಿಷ್ಟು ಚಾಲನೆ ಕೊಟ್ಟಲ್ಲಿ ಅದು ಸಹಜವಾಗಿ ಹೊಳೆಯಬಹುದು. ಸುಮ್ಮನೆ ಇಲ್ಲದ್ದೊಂದು ಕಲ್ಪಿಸು ವದರಲ್ಲಿ ಅರ್ಥವೇನು ?

ಮಣಿಲಾಲ— ಬಾಬೂರಾವ, ನಿಮ್ಮ ಮಾತಿನಿಂದ ನನಗೆ ಸ್ವಲ್ಪ ಧೈರ್ಯ ಬಂದಂತಾಗಿ, ನಿರಾಶೆಯಲ್ಲಿ ಆಶೆಯುಂಟಾಗಿದೆ. ನೀವು ಹೆಚ್ಚು ಉತ್ಸುಕತೆಯಿಂದ ಈ ಕೆಲಸವನ್ನು ಕೈಕೊಂಡಿರುವದರಿಂದ, ಪುನಃ ಆ ಅಲಂಕಾರಗಳನ್ನು ನೋಡೇನೆಂಬ ಆಶೆಯುಂಟಾಗಿದೆ; ಮತ್ತು ಅದರಿಂದ ನನ್ನ ಪತ್ತು ಮೊದಲಿನಂತೆಯೇ ಉಳಿದೀತೆಂದು ನಂಬಿರುವೆನು.

ಬಾಬೂರಾವ— ಹಾಗೆ ಆಶೆಯನ್ನು ಹಿಡಿಯಬೇಡಿರೆಂದು ನಾನು ಹೇಗೆ ಹೇಳಲಿ ? ಆಶೆಯಿಂದಲೇ ಮನುಷ್ಯನು ಜೀವಿಸುವನು; ಅದೇ ಮಾನವನ ಅಸ್ತಿತ್ವದ ಮೂಲ ಮಂತ್ರ ! ಆ ಅಲೌಕಿಕ ತುಡುಗನನ್ನು ಹಿಡಿಯುವದು ಮನುಷ್ಯಶಕ್ತಿಗೆ ಮೀರಿದ್ದೇ ಆದರೆ, ಕಡೆಗೆ ನಿಮ್ಮ ಆಭರಣ

ಗಳನ್ನಾದರೂ ಸಂಪಾದಿಸಿ ಕೊಡುವೆನು; ಆದರೆ ಈಗ ಮಾತ್ರ ಅವುಗಳನ್ನು ಯಾರು ಕಳವು ಮಾಡಿಕೊಂಡು ಹೋದರು? ಎಲ್ಲಿಗೆ ಹೋದರು? ಮುಂತಾದ ಯಾವ ಸಂಗತಿಗಳೂ ತಿಳಿದಿರುವದಿಲ್ಲ; ಆದರೂ ನೀವು ನಿರಾಶ ರಾಗಬೇಡಿರೆಂದು ಸೂಚಿಸುವೆನು.

ಮಣಿಲಾಲನು, ಪೋಪಟಲಾಲನು ಬರೆದುಕೊಟ್ಟ ಚೆಕ್ಕನ್ನು ಅವನಿಗೆ ತಿರುಗಿ ಕೊಡುವಾಗ ಅವನನ್ನು ಕುರಿತು— ನಿಮ್ಮ ಚೆಕ್ಕನ್ನು ಈಗ ನೀವು ತಿರುಗಿ ತಕ್ಕೊಳ್ಳಿರಿ. ನೀವು ಕೊಂಡ ಆಭರಣಗಳು ಸಿಗಲಿಲ್ಲ. ಅದಕ್ಕಾಗಿ ನನಗೆ ಬಹಳ ದುಃಖವಾಗಿದೆ; ಆದರೆ ಮಾಡುವದೇನು? ನನ್ನದು ನನಗೇ ತಿಳಿಯದಾಗಿದೆ. ಒಂದು ವೇಳೆ ನಿಮ್ಮ ಕೈಗೆ ಪೆಟ್ಟಿಗೆಯನ್ನು ಕೊಟ್ಟ ಬಳಿಕ ಆಭರಣವು ಇಲ್ಲದಂತಾಗಿದ್ದರೆ, ಅದಕ್ಕೆ ನೀವೇ ಜವಾಬುದಾರರಾಗುತ್ತಿದ್ದಿರಿ. ಅದಕ್ಕೂ ಮೊದಲೇ ಇಲ್ಲದಂತಾದ್ದರಿಂದ, ಎಷ್ಟು ದೊಡ್ಡ ಹಾನಿಯನ್ನಾದರೂ ನಾನೇ ಅನುಭೋಗಿಸಬೇಕಾಗಿದೆ.

ಪೋಪಟಲಾಲ— ಆ ಆಭರಣವು ಇಲ್ಲದಂತಾದ್ದರಿಂದ ನನಗಾದರೂ ವಿಷಾದವೆನಿಸಿದೆ. ಬೇಕಾದಷ್ಟು ಬೆಲೆ ಬಿದ್ದರೂ ಕೊಟ್ಟು, ಅದನ್ನು ಕೊಳ್ಳಲಿಕ್ಕೆ ನಾನು ಸಿದ್ಧನಿರುವೆನು; ಆದರೆ ಆಭರಣವೆಲ್ಲಿದೆ? ಇನ್ನು ಬಾಬೂರಾಯರ ಪ್ರಯತ್ನದಿಂದ ಪುನಃ ಕಂಡರೆ ಕಾಣಬಹುದು; ಯಾಕಂದರೆ ಅವರು ಹಿಡಿದಂತೆ ಮಾಡಿ ತೋರಿಸದೆ ಬಿಡುವವರಲ್ಲ.

ಮಣಿಲಾಲ— ಪರಮೇಶ್ವರನ ಕೃಪೆಯಿಂದ ಬಾಬೂರಾಯರ ಪ್ರಯತ್ನಕ್ಕೆ ಯಶ ದೊರೆಯಲಿ! ನಾನು ಈಗ ಎಷ್ಟೋ ವರ್ಷಗಳಿಂದ ಮುತ್ತು-ರತ್ನಗಳ ವ್ಯಾಪಾರ ಮಾಡುತ್ತ ಬಂದಿರುವೆನು. ಎಷ್ಟೋ ಶ್ರೀಮಂತರು ಮಾರಾಟಕ್ಕೆಂದು ತಮ್ಮ ಅಮೂಲ್ಯ ಹರಳು-ಕಲ್ಲುಗಳನ್ನು ನನ್ನ ಕಡೆಗೆ ಕಳಿಸುತ್ತ ಬಂದಿರುವರು. ಅವುಗಳನ್ನು ನಾನು ನನ್ನ ಶಕ್ತಿಮೀರಿ ಕಾಪಾಡುತ್ತಲೂ ಬಂದಿರುವೆನು; ಆದನೆ ಇಂದಿನಂಥ ಪ್ರಸಂಗ ಮಾತ್ರ ನನಗೆ ಹಿಂದೆಂದೂ ಬಂದಿದ್ದಿಲ್ಲ. ಇದರಲ್ಲಿ ನನ್ನದೇನೂ ದೋಷವಿರುವದಿಲ್ಲವೆಂಬದು ಎಲ್ಲರಿಗೂ ತಿಳಿದ ಮಾತೇ ಆಗಿರುವದು, ಎನ್ನಲು, ಅದಕ್ಕೆ ಬಾಬೂರಾಯನು— ನಿಮಗೆ ಯಾರೂ ದೋಷ ಕೊಡುವಂತಿಲ. ಯಾಕಂದರೆ.

ಯಾವ ಕಳ್ಳನು ನಿಮ್ಮ ಅಲಂಕಾರಗಳನ್ನು ಕದ್ದೊಯ್ದಿರುವನೋ, ಅವನಂಥ ಧೂರ್ತನೂ, ಕಳವಿನ ವಿದ್ಯೆಯಲ್ಲಿ ನಿಪುಣನೂ ಆದ ಅಸಾಧಾರಣವಾದ ವ್ಯಕ್ತಿಯನ್ನು ಈ ಭರತಖಂಡದಲ್ಲಿ ಬೇರೊಬ್ಬರನ್ನು ಕಾಣುವದು ಅಪರೂಪವೇ ಸರಿ. ಅಂದಬಳಿಕ ನಿಮ್ಮ ಸಾವಧಗಿರಿಯು ಎಲ್ಲಿಗೆ ಮುಟ್ಟೀತು? ಅವನು ನಿಮ್ಮಂತೆ ಎಷ್ಟೋ ಜನರ ಘಾತ ಮಾಡಿರುವನು. ಇದಕ್ಕೆ ಈ ಸರದಾರಸಿಂಗರೇ ಸಾಕ್ಷಿ.

ಸರದಾರಸಿಂಗ— ಆ ಅಪಮಾನಕಾರಕ ಮಾತನ್ನು ಪುನಃ ತೆಗೆಯುವದರಲ್ಲೇನು ಲಾಭವಿದೆ? ನಮ್ಮ ಸಂಸ್ಥಾನದಲ್ಲಿ ಇಂಥ ೨-೩ ಅತ್ಯದ್ಭುತ ಕಳವುಗಳನ್ನು ಬಹು ಚಮತ್ಕಾರ ರೀತಿಯಿಂದ ಮಾಡಿರುವನು. ಅದನ್ನು ವರ್ಣಿಸಲಸಾಧ್ಯವು. ಈಗ ಪುನಃ ಅವನು ನಮ್ಮೆಲ್ಲರ ಬೆನ್ನು ಚಪ್ಪರಿಸಿ ದಾಟಿಕೊಂಡಿರುವನು! ಹೇಗಾದರೂ ಮಾಡಿ, ಒಮ್ಮೆ ಅವನನ್ನು ಹಿಡಿದು ಚನ್ನಾಗಿ ಶಿಕ್ಷಿಸಬೇಕಾಗಿದೆ; ಆದರೆ ಅವನು ಸಿಗುವ ಬಗೆ ಹೇಗೆ?

ಆಗ ಬಾಬೂರಾಯನು ನಗುತ್ತ— ನಿಮ್ಮಿಂದ ಅವನನ್ನು ಹಿಡಿಯುವದಾಗುವದಿಲ್ಲವೆಂಬದು ಸಹಜವು; ಆದರೆ ಅವನು ಮಾತ್ರ ನಿಮ್ಮನ್ನು ಬೇಕಾದತ್ತ ಕುಣಿಸುತ್ತಿರುವನು. ಇದೇ ಪರಮ ಲಾಂಛನ.

ಆಗಲಿ! ಈಗ ನಮ್ಮನ್ನು ಬಿಟ್ಟು, ತಮ್ಮಂಥವರನ್ನು ಕುಣಿಸಹತ್ತಿರುವನಲ್ಲ? ಇನ್ನು ತಮ್ಮ ಚಾತುರ್ಯವನ್ನಷ್ಟು ನೋಡೋಣ!

ಈ ಎಲ್ಲ ಮಾತುಗಳನ್ನು ಕೇಳಿ ಪೋಪಟಲಾಲನು ನಗೆಮೊಗದಿಂದ:—ಏನು? ಆ ಬಹಾದ್ದರನು ಇಂಥ ಶಕ್ತಿಸಂಪನ್ನನಿರುವನೇ? ಅಂತೆಯೇ ಅವನನ್ನು ಹಿಡಿಯಲು ನೀವು ಇಷ್ಟು ಉತ್ಸುಕರಾಗಿರುವಿರಾ?

ಇನ್ನು ಹೀಗೆಯೇ ವ್ಯರ್ಥ ಕಾಲಹರಣ ಮಾಡುವದರಲ್ಲಿ ಪ್ರಯೋಜನವಿಲ್ಲ, ಎಂದು ನುಡಿದವನೇ, ಇನಸ್ಪೆಕ್ಟರನು ಆ ಕೋಣೆಯ ಬಾಗಿಲುಗಳನ್ನು ತೆರೆದನು. ಕೂಡಲೆ ಅರೆನಿಮಿಷದಲ್ಲಿ ಎಲ್ಲರೂ ಅಲ್ಲಿಂದ ಹೊರಟು ಹೋದರು. ಬಳಿಕ ಆ ತೆರವಾದ ಸ್ಥಳವನ್ನು ವರ್ತಮಾನ ಪತ್ರಕಾರರೂ ಸರಕಾರೀ ರಿಪೋರ್ಟರರೂ ವ್ಯಾಪಿಸಿದರು. ಅವರಿಗೆ ಇಂಥ ಚಮತ್ಕಾರಿಕ

ವಿಷಯ ಸಿಗುವದೇ ಅಪರೂಪ! ಅಂದ ಬಳಿಕ ಅವರು ಇಂಥ ಸುಯೋಗ ವನ್ನು ಕಳೆದುಕೊಳ್ಳುವರೇ ?

ಇನ್ನು ಆ ಕೋಣೆಯಲ್ಲಿ ಜನರ ಗದ್ದಲವಾಗಹತ್ತಿದ್ದನ್ನು ಕಂಡು ಬಾಬೂ ರಾಯನು ಮನೆಗೆ ಹೊರಡುವಂತೆ ಭೋಟೋನಿಗೆ ಸನ್ನೆ ಮಾಡಿದನು; ಮತ್ತು ಮಣಿಲಾಲನನ್ನು ಕುರಿತು—ಇನ್ನು ಮೇಲೆ ಈ ಕಳವಿನ ಸಂಬಂಧವಾಗಿ ಏನಾದರೂ ಮಾಹಿತಿ ದೊರೆತಲ್ಲಿ ಕೂಡಲೆ ನಮಗೆ ತಿಳಿಸಿರಿ. ಎಲ್ಲಿಯ ವರೆಗೆ ಆಭರಣಗಳ ಶೋಧವಾಗುವದಿಲ್ಲವೋ, ಅಲ್ಲಿಯವರೆಗೂ ನಾನೂ ಸುಖ ದಿಂದ ನಿದ್ರಿಸುವದಿಲ್ಲ ವಿಪ್ಪಪ್ರಯತ್ನದಿಂದ ತುಡುಗನನ್ನು ಹಿಡಿಯುವ ವರೆಗೆ ನನಗೆ ಸಮಾಧಾನವಿಲ್ಲೆಂದು ತಿಳಿಯಿರಿ ಎಂದು ನುಡಿದನು.

ಆಗ ಮಣಿಲಾಲನು—ಈ ಭಯಂಕರ ಸಂಕಟದೊಳಗಿಂದ ಪಾರಾಗು ವದಕ್ಕಾಗಿ ನಾನು ನಿಮ್ಮನ್ನೇ ನಂಬಿರುವೆನು. ನಾನು ಕೊಡುತ್ತೇನೆಂದು ಒಪ್ಪಿಕೊಂಡ ಇನಾಮು ತಮಗೆ ಅಯೋಗ್ಯವಾಗಿ ಕಂಡಲ್ಲಿ, ಮೆಹೆರಬಾನಗಿ ಯೆಂದಾದರೂ ತಮ್ಮ ಲಕ್ಷ್ಯವು ಈ ಕಾರ್ಯದಲ್ಲಿರಲಿ! ಮತ್ತೆ ಬೇಕಾದವರು ಇದನ್ನು ಶೋಧಮಾಡಿ ಕೊಟ್ಟರೂ, ನಾನು ಅವರಿಗೆ ಗೊತ್ತಾದ ಇನಾ ಮನ್ನು ಕೊಡಲಿಕ್ಕೆ ತಪ್ಪಲಿಕ್ಕಿಲ್ಲ!

ಇಷ್ಟರಲ್ಲಿ ಪೋಪಟಲಾಲನ ಸುಂದರವಾದ ಕಾರು ಹೊರಡುವ ಸೂಚ ನೆಯ ಧ್ವನಿಗೈಯಹತ್ತಿತು. ಆಗ ಆ ಕೋಣೆಯೊಳಗಿಂದ ಪೋಪಟಲಾಲ, ಬಾಬೂರಾವ, ಭೋಟೋ, ಇನಸ್ಪೆಕ್ಟರದ್ವಯರು ಹೊರಬಿದ್ದು ಬಂದರು. ಡ್ರಾಯ್‌ವ್ಹರನು ಮೋಟಾರಿನಲ್ಲಿ ಸಜ್ಜಾಗಿ ಕುಳಿತಿದ್ದನು. ಪೋಪಟಲಾ ಲನು ಮೋಟಾರಿನ ಬಾಗಿಲು ತೆರೆದು, ಬಾಬೂರಾಯನನ್ನು ಕುರಿತು— ನಡೆಯಿರಿ ನನ್ನ ಸಂಗಡ! ಸ್ವಲ್ಪ ಉಪಾಹಾರ ತೀರಿಸಿಕೊಂಡು, ನಿಮ್ಮ ಮನೆಗೆ ಹೋಗೋಣ! ಅಲ್ಲಿ ನೀವು ಬಹಾದ್ದರನ ಸಂಬಂಧವಾದ ಕೆಲವು ಚಮತ್ಕಾರದ ಸಂಗತಿಗಳನ್ನು ಹೇಳಬೇಕು. ಅವುಗಳನ್ನು ಕೇಳುವ ಇಚ್ಛೆಯು ನನಗೆ ವಿಶೇಷವಾಗಿದೆ.

ಈ ಪ್ರಕಾರ ಪೋಪಟಲಾಲನು ನುಡಿಯುತ್ತಿರಲು, ಇತ್ತ ಭೋಟೋನು ಕಕ್ಕಾವಿಕ್ಕಿಯಾಗಿ ಸುತ್ತುಮುತ್ತು ನೋಡಹತ್ತಿದನು. ಅವನ ಆ ಸ್ಥಿತಿ

ಯನ್ನು ಕಂಡು ಎಲ್ಲರೂ ಆಶ್ಚರ್ಯದಿಂದ—ಏನಾಯಿತೆಂದು ಆತುರದಿಂದ ವಿಚಾರಿಸತೊಡಗಿದರು. ಆಗ ಅವನು ಅದಕ್ಕೆ ಏನೂ ಉತ್ತರ ಕೊಡದೆ, ಬಾಬೂರಾಯರ ಕೋಟಿನ ಹಿಂದೆ ಕೈಚಾಚಿ ಒಂದು ಸಣ್ಣ ಕಾರ್ಡನ್ನು ತೆಗೆದು, ಮಾಲಕನ ಕೈಯಲ್ಲಿ ಕೊಟ್ಟು—ರಾವಸಾಹೇಬ, ಯಾರೋ ಹುಡುಗಾಟಿಕೆಗಾಗಿ ಟಾಚಣಿಯಿಂದ ಇದನ್ನು ಚುಚ್ಚಿದ್ದಾರೆ; ಮತ್ತು ಇದರಲ್ಲಿ ಏನೋ ಬರೆದಿದೆ; ನೋಡಬೇಕು, ಎನ್ನಲು, ಬಾಬೂರಾಯನು ಅದನ್ನು ಓದಿಕೊಂಡು ತೀರ ಹತಾಶನಾಗಿ, ಛೋಟೂನ ಮುಖದ ಕಡೆಗೆ ನೋಡತೊಡಗಿದನು. ಆಗ ಆತನ ಕೈಯೊಳಗಿನ ಕಾರ್ಡು ಕೆಳಗೆ ಬಿತ್ತು. ಛೋಟೂನು ಅದನ್ನು ತಕ್ಕೊಂಡು ನೋಡಲು ಅದರಲ್ಲಿ ಆಭರಣವು ನನ್ನ ಕೈಸೇರಿದಾಗ ಎಷ್ಟು ಗಂಟೆಯಾಗಿತ್ತೆಂಬದನ್ನು ಇನಸ್ಪೆಕ್ಟರ ಸಾಹೇಬರನ್ನು ವಿಚಾರಿಸಿದಲ್ಲಿ ತಿಳಿಯುವದು, ಎಂಬದಾಗಿತ್ತು.

ಬಾಬೂರಾಯನು ಪರಮ ವಿಸ್ಮಿತನಾಗಿ —ಈಗಂತೂ ಇಲ್ಲಿ ನಾವು ನಾಲ್ಕೈದೇ ಜನರಿರುವೆವು. ಇವರಲ್ಲಿ ಇಂಥ ಕೆಲಸ ಮಾಡಿದವರಾರು? ಇದು ಇದಕ್ಕೂ ಮೊದಲೇ ಚುಚ್ಚಲ್ಪಟ್ಟಿದ್ದರೆ, ಇಲ್ಲಿಯವರೆಗೆ ನಮ್ಮೆಲ್ಲರಿಗೆ ಹೇಗೆ ಗೊತ್ತಾಗಲಿಲ್ಲ! ಏನು ಅದ್ಭುತ ಕೆಲಸವಿದು? ಇದರ ರಹಸ್ಯವೇ ತಿಳಿಯಲೊಲ್ಲದು! ಒಳ್ಳೇದು. ಇನಸ್ಪೆಕ್ಟರ ಸಾಹೇಬ, ನಿಮ್ಮ ಗಡಿಯಾರ ನೋಡಿ ವೇಳೆ ತಿಳಿಸಿ ನೋಡೋಣ? ಎಂದು ಬಾಬೂರಾಯನು ಮೆಲ್ಲನೆ ನುಡಿಯಲು ಅದಕ್ಕೆ ಇನಸ್ಪೆಕ್ಟರ ಸರದಾರಸಿಂಗನು—ನನ್ನ ಗಡಿಯಾರ ನೋಡಿಯೇ ವೇಳೆ ತಿಳಿಸಬೇಕೇನು? ನಿಮ್ಮಲ್ಲಿ ಗಡಿಯಾರವೇ ಇಲ್ಲವೇ? ಎನ್ನುತ್ತ ತನ್ನ ಗಡಿಯಾರದ ಸರಪಳಿಯನ್ನು ಹಿಡಿದು ಮೇಲಕ್ಕೆತ್ತಿದನು. ಆಗ ಸರಪಳಿಯ ತುದಿಗೆ ಅವನ ಸುವರ್ಣದ ಗಡಿಯಾರವಿರದೆ ಒಂದು ಸಣ್ಣ ಕಾರ್ಡು ಮಾತ್ರ ನೇತಾಡುತ್ತಿತ್ತು. ಆಗ ಅದನ್ನು ತಕ್ಕೊಂಡು ನೋಡಿದೊಡನೆಯೇ ಅವನ ಕಣ್ಣು ಕತ್ತಲು ಕವಿದಂತಾಗಿ, ಏನೂ ಮಾತಾಡಲಿಕ್ಕೆ ತೋಚದೆ ಬೆಪ್ಪನಂತೆ ನಿಂತುಕೊಳ್ಳಲು, ಭವಾನರಾಯನು ಆ ಕಾರ್ಡು ತಕ್ಕೊಂಡು ನೋಡುತ್ತಾನೆ; ಅದರಲ್ಲಿ ಪದ್ಧತಿಯಂತೆ ರಬ್ಬರ ಟಾಯಿಪಿನಿಂದ ಕೆಳಗೆ ಬರೆದ ವಿಷಯವು ಮುದ್ರಿತವಾಗಿತ್ತು! ನಿಮ್ಮ ಉತ್ತಮ ಕೆಲಸದ ಸಲು

ವಾಗಿ ನಿಮಗೆ ಯೋಗ್ಯವಾದ ಬಡತಿ ಸಿಗುವ ವೇಳೆ ಇದೇ ಅಲ್ಲವೇ ?

ಬಹಾದ್ದರ

---

## ನುಡಿದಂತೆ ನಡಿಯುವ ಕಳ್ಳ.

ಸರದಾರಸಿಂಗನ ಸ್ಥಿತಿಯು ಬಹಳ ಶೋಚನೀಯವಾಯಿತು. ಅವನ ಶ್ವಾಸೋಚ್ಛ್ವಾಸವು ಸರಿಯಾಗಿ ಆಡದೆ, ಮೂರ್ಛೆ ಬಂದು ಬಿಟ್ಟಂತೆ ಅವನು ನೆಲಕ್ಕೆ ಬಿದ್ದುಬಿಟ್ಟನು. ಅದನ್ನು ಕಂಡು ಭವಾನರಾಯನು ದಂಗಾಗಿ ಹೋದನು. ಆತನ ವಿಷಣ್ಣವದನವನ್ನು ಕಂಡು ಅಂಥ ಸ್ಥಿತಿಯಲ್ಲೂ ಬಾಬೂರಾಯನಿಗೆ ನಗೆ ಬಂದಿತು. ಅವನು ಅದನ್ನು ಬಹು ಪ್ರಯಾಸದಿಂದ ಆವರಿಸಿಕೊಂಡನು. ಪೋಪಟಲಾಲನೂ ಕೆಮ್ಮುವ ನೆವ ಮಾಡಿ ತನ್ನ ನಗೆಯನ್ನು ಮುಚ್ಚಿಕೊಳ್ಳಹತ್ತಿದನು. ಛೋಟೂನಿಗಂತೂ ನಗೆ ತಡೆಯಲಿಕ್ಕಾಗದೆ, ತನ್ನ ಕರವಸ್ತ್ರದಿಂದ ಮುಖವನ್ನು ಮುಚ್ಚಿಕೊಂಡನು.

ಮುಂದೆ ತುಸು ಹೊತ್ತಿನ ಮೇಲೆ ಸರದಾರಸಿಂಗನಿಗೆ ಚೇತನೆಯುಂಟಾಗಿ ಅವನ ಬಾಯಿಂದ ಶಬ್ದಗಳು ಹೊರಡಹತ್ತಿದವು. ಅವನು ತೀರ ದೀನ ಸ್ವರದಿಂದ— ಅಯ್ಯೋ! ನನ್ನ ಗಡಿಯಾರವು ಎಲ್ಲಿ ಹೋಯಿತು ? ಎರಡು ನೂರು ರೂಪಾಯಿ ಬೆಲೆಯ ನನ್ನ ಬಂಗಾರದ ಗಡಿಯಾರವನ್ನು ಕದ್ದವರಾರು? ಎಂಥ ವಿಚಿತ್ರವಿದು ? ಸರಪಳಿಯನ್ನು ಬಿಟ್ಟು ಗಡಿಯಾರವನ್ನಷ್ಟೇ ಕದ್ದೊಯ್ಯುವದೆಂದರೆ, ಸವಾರನು ಕುಳಿತಿರುವ ಕುದುರೆಯೇ ಕಳವಾಗಿ ಹೋದಂತಲ್ಲವೇ? ಇದು ಬೇರೆ ಯಾರ ಕೆಲಸವೂ ಅಲ್ಲ! ಆ ಬಹಾದ್ದರನದೇ ಇರಬೇಕು. ಇದಕ್ಕೆ ಸಂಶಯವೇಕೆ? ಕಾರ್ಡು ನೋಡಿದಾಗಲೇ ಸ್ಪಷ್ಟವಾಗುವದು. ಬಾಬೂರಾವ, ಆ ಕುಹಕನು ನನ್ನನ್ನು ಹಲವು ರೀತಿಯಿಂದ ಅಪಮಾನಗೊಳಿಸಿ, ಕಡೆಗೆ ಕೊಲ್ಲಬೇಕೆಂದಿರುವನೋ? ಅಥವಾ ಇನ್ನು ಸ್ವಲ್ಪಾವಧಿಯಲ್ಲಿಯೇ ನನ್ನನ್ನು ಹುಚ್ಚರ ಆಸ್ಪತ್ರಿಗಟ್ಟಬೇಕೆಂದು ಮಾಡಿರುವನೋ ತಿಳಿಯದು.

ಬಾಬೂರಾವ— ನಿಜವು; ಇದು ಬಹಾದ್ದರನ ಕೆಲಸವೇ ಹೌದು !

ಆದರೆ ಹೋದ ವಸ್ತುವಿನ ಬಗ್ಗೆ ದುಃಖಿಸಿದರೆ ಆಗುವದೇನು? ಅವನ ಈ ಹುಡುಗಾಟಿಕೆಯ ಬಗ್ಗೆ ಸಿಟ್ಟಾಗಿ ಫಲವೇನು? ಅವನು ಅಂದಂತೆ ನೀವು ನಿಮ್ಮ ಕೆಲಸವನ್ನು ಲಕ್ಷ್ಯಪೂರ್ವಕವಾಗಿ ಮಾಡಿರುವದಿಲ್ಲ! ಅದಕ್ಕಾಗಿಯೇ ನಿಮಗೆ ಈ ತರದ ಬಡತಿ (!) ಯಾದದ್ದರಲ್ಲಿ ಆಶ್ಚರ್ಯವೇನು? ಇನ್ನು ನಿಮ್ಮ ಮೂಗಿನ ಮೇಲಿನ ಉಪನೇತ್ರವನ್ನಷ್ಟು ಎಚ್ಚರದಿಂದ ಕಾಪಾಡಿಕೊಳ್ಳಿರಿ. ಈಗಾದ ಹಾನಿಯ ಬಗ್ಗೆ ಮಾತ್ರ ನನಗಾದರೂ ಅತ್ಯಂತ ಖೇದವೆನಿಸುತ್ತದೆ.

ಬೆಂಕೀ ಹಚ್ಚಲಿ ನನ್ನ ದುಃಖವು! ಎನ್ನುತ್ತಾ ಸರದಾರಸಿಂಗನು ಆವೇಶದಿಂದ ಎದ್ದುನಿಂತು, ಹಲ್ಲು ದವಡೆಯನ್ನು ಕಚ್ಚಿ ದೊಡ್ಡ ಧ್ವನಿಯಿಂದ— ಆ ಮಂಗನು ನನ್ನ ಗಡಿಯಾರಕ್ಕೆ ಕೈಹಾಕಿದಾಗ, ನನ್ನ ಲಕ್ಷ್ಯವು ಅತ್ತ ಹೋಗಿದ್ದರೆ, ಅವನನ್ನು ಒಂದೇ ಪೆಟ್ಟಿನಿಂದ ಗುದ್ದಿ ನೆಲಕ್ಕೆ ಕೆಡವದೇ ಬಿಡುತ್ತಿದ್ದಿಲ್ಲ; ಆದರೆ ಅವನು ತಪ್ಪಿಸಿಕೊಂಡು ಹೋಗಿರುವನು; ಹೋಗಲಿ. ಏನು ಮಾಡತಕ್ಕದ್ದು! ಎಂದು ಒಳ್ಳೇ ರಭಸದಿಂದ ತನ್ನ ಮುಷ್ಟಿಯನ್ನು ಮೇಲಕ್ಕೆತ್ತಿ ನುಡಿದವನೇ, ಅಲ್ಲಿಂದ ಹೊರಟೇ ಹೋದನು.

ಅವನು ಹೀಗೆ ಸಿಟ್ಟಿನಿಂದ ಹೊರಟು ಹೋಗುವದನ್ನು ಕಂಡು ಪೋಪಟಲಾಲನು— ಬಾಬೂರಾವ, ಇವರಿಗೂ ಆಮಂತ್ರಣ ಕೊಟ್ಟು ಇವರನ್ನು ನನ್ನ ಸಂಗಡ ಕರೆದೊಯ್ಯಬೇಕೆಂದು ಮಾಡಿದ್ದೆ; ಆದರೆ ಇವರ ಪ್ರೀತಿಯ ಅಮೂಲ್ಯ ಗಡಿಯಾರವೇ ಕಳವಾಗಿ ಹೋದದ್ದರಿಂದ, ಇವರು ಬಹಳ ಚಿಂತೆಗೊಳಗಾಗಿರುವರು. ಇಂಥ ಸಂಧಿಯಲ್ಲಿ ಆಮಂತ್ರಣ ಕೊಟ್ಟರೂ ಬರಲಿಕ್ಕಿಲ್ಲವೆಂದು ತಿಳಿದು, ಸುಮ್ಮನಾದೆನು. ಸಭ್ಯಗೃಹಸ್ಥರ ಎದೆಯ ಮೇಲಿನ ಗಡಿಯಾರವನ್ನು ಅವರಿಗೆ ಗೊತ್ತಾಗದಂತೆ ಕಳವು ಮಾಡುವದೆಂದರೆ, ಸಾಮಾನ್ಯ ಕೆಲಸವೇ? ಇಂಥ ಅದ್ಭುತ ಕೆಲಸ ಮಾಡುವವನು ನಿಜವಾಗಿಯೂ ಬಹಾದ್ದರನೇ ಸರಿ! ಬಾಬೂರಾವ, ನಿಮ್ಮ ಭೆಟ್ಟಿಯಾದದ್ದು ಸಂತೋಷವೇ; ಆದರೆ ಬಹಾದ್ದರನ ಭೆಟ್ಟಿಯಾಗುವದರಿಂದ ಇದಕ್ಕೂ ಹೆಚ್ಚಿನ ಆನಂದವಾಗುತ್ತಿತ್ತೆಂದು ನನಗನಿಸಿದೆ, ಎಂದು ನುಡಿದನು.

ಬಾಬೂರಾಯನು— ನನಗಾದರೂ ಬಹಾದ್ದರನ ಭೆಟ್ಟಿಯಾಗುವ ಅಪೇಕ್ಷೆ ಹೆಚ್ಚಾಗಿದೆ. ನಾನು ಇಂದಿಲ್ಲ, ನಾಳೆಯಾದರೂ ಅವನನ್ನು ಕಂಡೇ ಕಾಣುವೆನೆಂಬದರಲ್ಲೇನೂ ಸಂಶಯವಿಲ್ಲ.

ನಂತರ ಪೋಪಟಲಾಲನು ಬಾಬೂರಾವ ಮತ್ತು ಛೋಟೂಸಿಂಗ ಇವರೊಡನೆ ತನ್ನ ಕಾರಿನಲ್ಲಿ ಕುಳಿತುಕೊಂಡು ಮುಂಬೈಯೊಳಗಿನ ಒಂದು ಪ್ರಸಿದ್ಧ ರೆಸ್ಟೋರೆಂಟಿಗೆ ಹೋದನು. ಅಲ್ಲಿ ಫಲಾಹಾರ ನಡೆದಾಗ ಬಾಬೂರಾಯನು ವಿಶೇಷ ಮಾತಾಡಲಿಲ್ಲ; ಯಾಕಂದರೆ ಅವನು ಬಹಾದ್ದರನ ಅಸಾಧ್ಯ ಕೃತಿಯನ್ನು ಕುರಿತು ಆಲೋಚನೆ ಮಾಡುತ್ತಿದ್ದನು. ಮೊದಲಿನ ಹೊಡತಕ್ಕೇ ಅವನು ನನ್ನನ್ನು ಈ ಪರಿ ಅಪಮಾನಗೊಳಿಸಿರಲು, ನಾನು ಆತನ ಸುಳುವನ್ನು ತಿಳಿಯುವ ಬಗೆ ಹೇಗೆ? ಹೀಗೆ ಎಷ್ಟು ಆಲೋಚಿಸಿದರೂ ಅವನಿಗೆ ಬಹಾದ್ದರನನ್ನು ಹಿಡಿಯುವ ಯುಕ್ತಿಯು ತೋಚಲಿಲ್ಲ.

ಫಲಾಹಾರ ಮುಗಿದ ಮೇಲೆ ಬಾಬೂರಾಯನು ಆದರದಿಂದ ಪೋಪಟಲಾಲನನ್ನು ತನ್ನ ಮನೆಗೆ ಕರೆದುಕೊಂಡು ನಡೆದನು. ಮನೆಗೆ ತಲುಪಿದ ಬಳಿಕ ಬಾಬೂರಾಯನು ಪೋಪಟಲಾಲನನ್ನು ತನ್ನ ಸ್ವಂತದ ಆಫೀಸ ರೂಮಿಗೆ ಕರೆದೊಯ್ದನು; ಮತ್ತು ಬಹಳ ಆದರದಿಂದ ಸರ್ವೋತ್ಕೃಷ್ಟವಾದ ಚುರೂಟುಗಳನ್ನು ಮುಂದಿಟ್ಟನು. ಸ್ವತಃ ತಾನೇ ತನ್ನ ಕೈಯಿಂದ ಅತ್ಯುತ್ತಮವಾದ ಕಾಫಿಯನ್ನು ತಯಾರಿಸಿ ಕೊಟ್ಟನು. ಆಗ ಪೋಪಟಲಾಲನು ಅತ್ಯಾನಂದದಿಂದ— ಬಾಬೂರಾವ, ಇನ್ನು ಬಹಾದ್ದರನ ವಿಷಯವಾಗಿ ನಿಮಗೆ ಗೊತ್ತಿದ್ದ ಮಾಹಿತಿಯನ್ನಷ್ಟು ಹೇಳಿರಿ. ಅದನ್ನು ಕೇಳುವ ಆತುರತೆಯು ನನಗೆ ಹೆಚ್ಚಾಗಿದೆ, ಎನ್ನಲು, ಅದಕ್ಕೆ ಬಾಬೂರಾಯನು— ಇರಬಹುದು! ಆದರೆ ಅವನ ವಿಷಯದ ವಿಶೇಷ ಮಾಹಿತಿ ಇನ್ನೂ ನನಗೆ ಚನ್ನಾಗಿ ಗೊತ್ತಾಗಿರುವದಿಲ್ಲ. ಆದರೂ ಅವನು ಒಳ್ಳೇ ಚೋರಕರ್ಮ ಕುಶಲನಿದ್ದಾನೆಂಬದು ಮಾತ್ರ ಯಾರಾದರೂ ಒಪ್ಪಿಕೊಳ್ಳುವಂತಾಗಿದೆ. ಅವನಂಥವನು ಈ ಮುಂಬಯಿ ನಗರದಲ್ಲಷ್ಟೇ ಏಕೆ, ಯುರೋಪ ಖಂಡದಲ್ಲಿ ಸಹ ಇರುವನೋ ಇಲ್ಲವೋ ಎಂಬ ಸಂಶಯ ವುಂಟಾಗಿದೆ. ಅವನ ವಿಷಯದ ಮಾಹಿತಿ ಗೊತ್ತಾಗಿ, ಅವನನ್ನು ಹಿಡಿ

ಯುವ ವರೆಗೆ ಇನಸ್ಪೆಕ್ಟರ ಸರದಾರಸಿಂಗನು ಶುದ್ಧಿಯ ಮೇಲೆ ಉಳಿಯುವದು ಕಠಿಣವಾಗಿದೆ. ನನ್ನಂಥವನು ಸಹ ಗೊಂದಲದಲ್ಲಿ ಬಿದ್ದಿರುವೆನು. ಈ ಮೊದಲು ಇಂಥ ಪ್ರಸಂಗವೇ ನನಗೆ ಬಂದಿರಲಿಲ್ಲ! ಈಗ ಮಾತ್ರ ವಿಶ್ವ ಪ್ರಯತ್ನ ಮಾಡಿಯಾದರೂ ಅವನನ್ನು ಹಿಡಿಯಲೇ ಬೇಕಾಗಿದೆ. ಅಲ್ಲಿಯ ವರೆಗೆ ಸುಖನಿದ್ರೆಯಾಗುವಂತಿಲ್ಲ ಎನ್ನಲು, ಅದಕ್ಕೆ ಭೋಟುವು—ರಾವಸಾಹೇಬ, ಅದಕ್ಕೆ ಟೊಂಕ ಕಟ್ಟಿದ ಬಳಿಕ ಇನ್ನು ಅವನನ್ನು ಹಿಡಿಯುವದು ತಡವಾಗಲಿಕ್ಕಿಲ್ಲ. ಸ್ವಲ್ಪ ದಿನಗಳಲ್ಲೇ ಅವನು ತುರಂಗ ಕಂಡನೆಂತಲೇ ತಿಳಿಯಬೇಕು, ಎಂದು ನುಡಿದನು.

ಆಗ ಪೋಪಟಲಾಲನು— ನಿಮ್ಮ ಈ ಭಾಷಣವು ಅವನಿಗೆ ತಿಳಿದರೆ ಅವನು ಒಂದು ವೇಳೆ ಸಾವಧನಾದರೂ ಆಗಬಹುದು.

ಬಳಿಕ ಬಾಬೂರಾಯನು ಬಹಾದ್ದರನ ಸಂಬಂಧವಾದ ಸಂಕ್ಷಿಪ್ತ ಮಾಹಿತಿಯನ್ನು ಪೋಪಟಲಾಲನಿಗೆ ತಿಳಿಸಿದನು. ಅವನು ಸರದಾರಸಿಂಗನನ್ನು ಮೋಸಗೊಳಿಸಿದ್ದು, ಬ್ಯಾಂಕಿನಲ್ಲಿ ಕಳವು ಮಾಡಿದ್ದು, ಟೆಲಿಫೋನದಿಂದ ಭಾಷಣ ಮಾಡಿದ್ದು ಇತ್ಯಾದಿ ಸಂಗತಿಗಳನ್ನು ಕೇಳಿ ಪೋಪಟಲಾಲನು ಹೊಟ್ಟೆತುಂಬಾ ನಕ್ಕನು.

ಇಂಥ ಕಳ್ಳರ ಆಟವು ಮೂರೇ ದಿನದ್ದೆಂಬದು ಸಹಜವು. ಅವನು ಒಂದಿಲ್ಲೊಂದು ದಿನ ಹಿಡಿಯಲ್ಪಡತಕ್ಕವನೇ ಸರಿ! ನಾನು ಆ ಶುಭ ದಿನವನ್ನೇ ಎದುರು ನೋಡುತ್ತಿರುವೆನು. ಇಷ್ಟೇ ಅಲ್ಲ; ಅವನನ್ನು ನಾನು ಖಂಡಿತವಾಗಿಯೂ ಬೇಗನೇ ಹಿಡಿಯುವೆನು, ಎಂದು ಬಾಬೂರಾಯನು ನುಡಿದನು.

ಆಗ ಪೋಪಟಲಾಲನು— ದೇವರು ನಿಮ್ಮ ಪ್ರಯತ್ನಕ್ಕೆ ಯಶ ಕೊಡಲಿ! ನಾನಂತೂ ನನ್ನ ಆಭರಣಗಳು ಸಿಗುವವೋ ಇಲ್ಲವೋ ಎಂಬ ಸಂಶಯದಲ್ಲಿದ್ದೇನೆ. ಆ ಬಹಾದ್ದರನನ್ನು ಹಿಡಿಯುವ ಕೆಲಸದಲ್ಲಿ ನಿಮಗೆ ನನ್ನ ಸಹಾಯ ಬೇಕಾದಲ್ಲಿ, ನಾನು ಅವಶ್ಯವಾಗಿ ಸಿದ್ಧನಿರುವೆನು. ಅವನ ವಿಷಯವು ನನಗೆ ಒಳ್ಳೇ ಮೋಜಿನದಾಗಿದೆ. ನನಗೆ ಈಗ ತುಂಬಾ ಅನುಕೂಲವಿರುತ್ತದೆ. ಅವನ ವಿಷಯದಲ್ಲಿ ಏನಾದರೂ ಹೊಸ ಸಂಗತಿ ತಿಳಿ

ದಲ್ಲಿ ಅಥವಾ ಚೀಟಿ ಚಪಾಟಿಗಳು ಕಳುಹಲ್ಪಟ್ಟಲ್ಲಿ, ನನಗೆ ಟೆಲಿಫೋನದಿಂದ ತಿಳಿಸಿರಿ, ಅಂದರೆ ಆ ಕೂಡಲೆ ನಾನು ಹೊರಟು ಬರುವೆನು.

ಅವಶ್ಯವಾಗಿ ತಿಳಿಸುವೆನು! ಆದರೆ ಬಹಳ ವೇಳೆಯವರೆಗೆ ನನಗೆ ತಿರುಗಾಟವೇ ಇರುವದರಿಂದ, ತಮಗೆ ತಪ್ಪದೆ ತಿಳಿಸಲಾಗುವ ಬಗೆ ಹೇಗೆ! ತಮ್ಮ ಆಭರಣವು ಇಂತಿಷ್ಟು ದಿವಸಗಳಲ್ಲಿ ಸಿಗುವದೆಂಬದನ್ನು ಸಹ ಈಗ ಹೇಳಲಿಕ್ಕಾಗುವದಿಲ್ಲ, ಎಂದು ಬಾಬೂರಾಯನೆಂದನು.

ಪೋಪಟಲಾಲನು ಬಾಬೂರಾಯನ ಅಪ್ಪಣೆ ತಕ್ಕೊಂಡು ಹೊರಟು ಹೋದನು. ಇತ್ತ ಬಾಬೂರಾಯನೊಬ್ಬನೇ ಬಹಾದ್ದರನ ವಿಷಯವಾಗಿ ಆಲೋಚಿಸತೊಡಗಿದನು. ಅವನ ಕಡೆಗೆ ಎಷ್ಟೋ ಅವಶ್ಯದ ಕೆಲಸಗಳು ಒಪ್ಪಿಸಲ್ಪಟ್ಟಿದ್ದವು. ಅವನ್ನೆಲ್ಲ ಬೇರೆಯವರಿಗೊಪ್ಪಿಸಿ, ಬಹಾದ್ದರನನ್ನು ಹಿಡಿಯುವ ಪ್ರಯತ್ನವನ್ನೇ ಮೊದಲು ಮಾಡಬೇಕೆಂದು ಆತನು ನಿಶ್ಚಯಿಸಿಕೊಂಡನು.

ಮರುದಿನ ಬೆಳಗಾಗುತ್ತಲೆ ಅವನ ಕಡೆಗೆ ಅನೇಕ ಜನರು ಅನೇಕ ಕೆಲಸಗಳಿಗಾಗಿ ಬರತೊಡಗಿದರು; ಆದರೆ ಈ ದಿನ ಯಾರ ಭೆಟ್ಟಿಯನ್ನೂ ತೆಗೆದುಕೊಳ್ಳಲಿಕ್ಕಾಗುವದಿಲ್ಲೆಂದು ಖಂಡಿತವಾಗಿ ತಿಳಿಸುವಂತೆ ಆತನು ಛೋಟೂನಿಗೆ ಅಪ್ಪಣೆ ಮಾಡಿದ್ದನು; ಆದರೂ ಮುಂಬೈ ಮಂತ್ರಿ ಸಭಾಸದರಲ್ಲೊಬ್ಬನು ಒಂದು ಮಹತ್ವದ ಆಲೋಚನೆಯನ್ನು ಕೇಳುವದಕ್ಕಾಗಿ ಅವನೆಡೆಗೆ ಬಂದಿದ್ದನು. ಅವನಿಗೂ ಕೂಡ ಮೇಲಿನ ಉತ್ತರವೇ ಕೊಡಲ್ಪಟ್ಟಿತು. ಬಾಬೂರಾಯನು ಈ ದಿನ ಎಲ್ಲಿಯೂ ಹೊರಗೆ ಸಹ ಹೋಗಲಿಲ್ಲ. ಸಮಗ್ರ ವೇಳೆಯನ್ನು ಅದೇ ಆಲೋಚನೆಯಲ್ಲೇ ಸೀಗರೇಟ ಸೇದುತ್ತ ಕಳೆದುಬಿಟ್ಟನು.

ಹೀಗೆ ಇಡಿ ದಿನವಷ್ಟೇ ಅಲ್ಲದೆ ಮಧ್ಯ ರಾತ್ರಿಯವರೆಗೆ ವಿಚಾರ ಮಾಡಿದರೂ ಸಹ ಆತನ ಮನಸ್ಸಿನ ನಿಶ್ಚಯವಾಗಲಿಲ್ಲ! ಕಡೆಗೆ ನಿದ್ರೆ ಬರಲಾರಂಭಿಸಿತು. ಆಗ ಬಾಬೂರಾಯನು ನಿರ್ವಾಹವಿಲ್ಲದೆ ಮಲಗಿಕೊಂಡನು; ಆದರೂ ನಾಳೆ ಯಾವ ಕೆಲಸಕ್ಕೆ ಹತ್ತಬೇಕೆಂಬ ಆಲೋಚನೆಯು ಅವನಲ್ಲಿ ನಡೆದೇ ಇತ್ತು.

ಬಾಬೂರಾಯನು ಎಷ್ಟು ವೇಳೆ ನಿದ್ರಿಸಿದನೋ ತಿಳಿಯದು ! ಅವನಿಗೆ ಯಾವದೋ ಧ್ವನಿಯು ಕೇಳಿದಂತಾಗಿ ಪಕ್ಕನೆ ಕಣ್ಣು ತೆರೆದು ನೋಡುತ್ತಾನೆ; ಅಂಧಕಾರಮಯ ! ಆದರೂ ತನ್ನ ಕೋಣೆಯಲ್ಲಿ ಯಾರೋ ಪ್ರವೇಶಿಸಿರುವದು ಮಾತ್ರ ನಿಶ್ಚಯವೆಂದು ತಿಳಿದನು; ಅದರಿಂದ ಅವನು ತನ್ನ ಪಿಸ್ತೂಲಿನ ಕಡೆಗೆ ಕೈಯಾಡಿಸಹತ್ತಿದನು. ಇಷ್ಟರಲ್ಲಿ ಅವನಿಗೆ ಯಾರದೋ ಉಷ್ಣ ಶ್ವಾಸವು ತಗಲಿದಂತೆಯೂ, ಮುಖದ ಮೇಲೆ ಮೆಲ್ಲನೆ ಕೈಯಾಡಿಸಿದಂತೆಯೂ ಭಾಸವಾಯಿತು. ಇದರ ಬಗ್ಗೆ ಆತನು ತನ್ನಲ್ಲಿಯೇ ವಿಚಾರಿಸುತ್ತಿರುವಷ್ಟರಲ್ಲಿ ಅವನ ಪ್ರಜ್ಞೆ ತಪ್ಪಿ ಹೋಗಿ, ಅವನು ಮೈಮರೆತನು. ಅವನ ತಲೆಗೆ ಬಡಿಗೆಯು ತಾಕಿದರೂ ಸ್ಮೃತಿಯಾಗುವಂತಿಲ್ಲ; ಅಷ್ಟು ಅವನು ನಿಶ್ಚೇಷ್ಟಿತನಾದನು !

ಮುಂದೆ ಸ್ವಲ್ಪ ಹೊತ್ತಿನ ಮೇಲೆ ಬಾಬೂರಾಯನು ಮೆಲ್ಲನೆ ಸ್ಮೃತಿ ಹೊಂದತೊಡಗಿದನು. ಅವನು ಕಣ್ಣು ತೆರೆದು ನೋಡುತ್ತಾನೆ, ಕೋಣೆ ತುಂಬ ಅದ್ಭುತವಾದ ಪ್ರಕಾಶ ಬಿದ್ದಿದೆ; ಅದರ ಪ್ರಖರತೆಗೆ ಆತನ ಕಣ್ಣುಗಳು ಒಮ್ಮೆಲೆ ಮುಚ್ಚಿದವು. ಅವನು ಕಣ್ಣು ಮುಚ್ಚಿಕೊಂಡೇ ಆಲೋಚಿಸತೊಡಗಿದನು. ನಾನಂತೂ ಮಲಗುವ ಮುಂಚೆ ದೀಪವನ್ನು ಶಾಂತ ಮಾಡಿ ಮಲಗಿದ್ದೆನು. ಈ ಮೊದಲು ಎಚ್ಚತ್ತಾಗ ಕೂಡ ದೀಪವಿರಲಿಲ್ಲ, ಈಗ ಇಂಥ ಪ್ರಖರತರವಾದ ಉಜ್ವಲ ಬೆಳಕು ಎಲ್ಲಿಂದ ಬಂತು ? ಎಂದು ಆಲೋಚಿಸುತ್ತ ಮೆಲ್ಲನೆ ಏಳಹೋದನು; ಆದರೆ ಏಳುವ ಬಗೆ ಹೇಗೆ ? ಕೈಕಾಲುಗಳು ಉತ್ತಮ ನೂಲಿನ ಹಗ್ಗದಿಂದ ಬಿಗಿಯಲ್ಪಟ್ಟಿವೆ. ಅದರಿಂದ ಬಾಬೂರಾಯನು ಪರಮಾಶ್ಚರ್ಯಗೊಂಡು, ಮತ್ತೆ ಕಣ್ಣು ತೆರೆದನು. ಎದುರಿಗೆ ನೋಡುತ್ತಾನೆ, ಖುರ್ಚಿಯ ಮೇಲೆ ಒಬ್ಬ ಗೃಹಸ್ಥನು ಬಂದು ಕುಳಿತಿದ್ದಾನೆ !

ಆ ಗೃಹಸ್ಥನು ಸಾಧಾರಣ ನಿಲುವಿಕೆಯವನಿದ್ದು, ಹೊಗೆಬಣ್ಣದ ವಸ್ತ್ರಗಳನ್ನು ಧರಿಸಿದ್ದನು; ಮತ್ತು ಮುಖವ ಮೇಲೆ ಒಂದು ತಿಳುವಾದ ಜಾಳಿಗೆಯಂಥ ವಸ್ತ್ರವನ್ನು ಹಾಕಿಕೊಂಡಿದ್ದನು. ಅದರಲ್ಲಿ ಕಣ್ಣುಗಳಿಗಾಗಿ ಸಣ್ಣವೆರಡು ಛಿದ್ರಗಳಿದ್ದವು. ಆ ಛಿದ್ರದೊಳಗಿಂದ ಅವನ ನೀಲವರ್ಣದ ಕಣ್ಣುಗಳು ಹೊಳೆಯುತ್ತಿದ್ದವು. ಇದರ ಹೊರ್ತಾಗಿ ಅವನನ್ನು ಗುರ್ತಿಸುವ ಸಾಧನ

ಗಳೇನೂ ಇದ್ದಿಲ್ಲ. ಅವನು ಒಳ್ಳೇ ಚೌಲಿನಿಂದ ಕಾಲ ಮೇಲೆ ಕಾಲು ಹಾಕಿಕೊಂಡು ಬಲಗೈಯಲ್ಲಿದ್ದ ತುಂಬಿದ ಪಿಸ್ತೂಲನ್ನು ಬಾಬೂರಾಯನ ಎದೆಗೆ ಗುರಿಯಿಟ್ಟು ಕುಳಿತುಕೊಂಡಿದ್ದನು.

ಬಾಬೂರಾಯನು ಪರಮಾಶ್ಚರ್ಯಗೊಂಡು ಆ ಹೊಸಬನನ್ನು ಒಂದೇ ಸವನೆ ನೋಡತೊಡಗಿದನು. ಏಳಬೇಕೆಂದರೆ, ಬರುವಂತಿಲ್ಲ. ತಲೆ ಅಲ್ಲಾಡಿಸುವದು, ಮಾತಾಡುವದು ಹೊರ್ತಾಗಿ ಉಳಿದ ಸ್ವಾತಂತ್ರ್ಯವೇನೂ ಅವನಲ್ಲಿರಲಿಲ್ಲ. ಅವನು ಸಂಶಯ ದೃಷ್ಟಿಯಿಂದ ಆ ಪಿಸ್ತೂಲಿನ ಕಡೆಗೆ ನೋಡುತ್ತ ಕ್ಷೀಣ ಸ್ವರದಿಂದ— ನಮಸ್ಕಾರ ! ಬೆಳಗು ಬಂದಂತೆ ಕಾಣುತ್ತದಲ್ಲವೆ ?

ಹೊಸಬನು ಮೆಲ್ಲನೆ ನುಡಿದನು— ಇನ್ನೂ ಎರಡು ಬಡಿಯಲಿಕ್ಕೆ ಮೂರು ಮಿನೀಟು ಕಡಿಮೆಯಿವೆ. ಈ ವೇಳೆಯು ಸಭ್ಯ ಜನರಿಗೆ ಭೆಟ್ಟಿಯಾಗಲು ತಕ್ಕದ್ದಲ್ಲ ! ಅವನ ಸ್ವರವು ಮಧುರವಾಗಿದ್ದು, ಭಾಷೆಯು ಗಂಭೀರವಾಗಿತ್ತು. ಅವನು ಸಭ್ಯನೂ ಸುಶಿಕ್ಷಿತನೂ ಇದ್ದ ಹೊರ್ತು ಈ ಪ್ರಕಾರದ ಭಾಷಣವು ಹೊರಡುತ್ತಿರಲಿಲ್ಲ !

ಬಾಬೂರಾಯನು ಮತ್ತಿಷ್ಟು ಆಶ್ಚರ್ಯಗೊಂಡು— ಸುಮ್ಮನೆ ಮಾತಾಡುವದರಲ್ಲಿ ಅರ್ಥವೇನು ? ತಾವು ಯಾವ ಉದ್ದೇಶದಿಂದ ನನಗೆ ದರ್ಶನ ಕೊಟ್ಟು, ನನ್ನನ್ನು ಧನ್ಯನಾಗಿ ಮಾಡಿದಿರಿ ? ದಯಮಾಡಿ ಹೇಳುವವಾಗಬೇಕು.

ನಾನು ಇಂದಿನ ವರೆಗೆ ಯಾರ ಮುಂದೆಯೂ ಸುಳ್ಳಾಡಿರುವದಿಲ್ಲ ! ಯಾರಿಗಾದರೂ ಭೆಟ್ಟಿಯಾಗುವೆನೆಂದು ಹೇಳಿದ್ದರೆ ಮಾತ್ರ ಅವರಿಗೆ ಭೆಟ್ಟಿಯಾಗುವೆನು.

ಬಾಬೂರಾಯನು ಒಂದು ಕ್ಷಣ ಹೊತ್ತು ವಿಚಾರ ಮಾಡಿ, ಮತ್ತೆ ಕೋಮಲ ಸ್ವರದಿಂದ— ನನ್ನ ಸ್ಮರಣ ಶಕ್ತಿಯು ತೀಕ್ಷ್ಣವಾದದ್ದೆಂದು ಇಂದಿನ ವರೆಗೆ ತಿಳಕೊಂಡಿದ್ದೆನು. ಅದು ಈಗ ಸಿಥಿಲವಾದಂತಾಯಿತಲ್ಲ! ನಾನು ಯಾರಾದರೂ ಅಪರಿಚಯದ ಸಭ್ಯ ಜನರಿಗೆ ಭೆಟ್ಟಿಯಾಗುವಂತೆ ತಿಳಿಸಿದ್ದರೆ, ಅದರಂತೆ ನನ್ನ ನೋಟಬುಕ್ಕಿನಲ್ಲಿ ಅವರ ಹೆಸರು, ವೇಳೆ ಬರೆ

ದಿಡುವದು ನನ್ನ ಸ್ವಭಾವ. ಅಲ್ಲಿಯೇ ಮೇಜಿನ ಮೇಲೆ ನನ್ನ ನೋಟ ಬುಕ್ಕು ಬಿದ್ದಿದೆ. ಬೇಕಾದರೆ ತೆಗೆದು..............

ಬಾಬೂರಾಯನ ಮಾತು ಪೂರಾ ಮುಗಿಯುಷ್ಟಗಲ್ಲಿ ಆ ಗೃಹಸ್ಥನು ಮೋರೋಕ್ಕೊ ಲೆದರಿನ ಕೆಂಪು ಕವ್ಹರಿನ ಸುಂದರವಾದ ನೋಟಬುಕ್ಕನ್ನು ತೆಗೆದು ಅಂದಿನ ತಾರೀಖಿಗೆ ಏನು ಬರೆದಿದೆ? ಎಂಬವನ್ನು ಶೋಧ ಮಾಡಿದನು. ಅದರಲ್ಲಿ ಬಾಬೂರಾಯನು ಹೇಳಿದಂತೆ ಅಂದಿನ ದಿನ ಭೆಟ್ಟಿಯಾಗ ತಕ್ಕ ಕೆಲ ಜನರ ಹೆಸರುಗಳಿದ್ದವು. ಅವುಗಳನ್ನು ನೋಡಿಕೊಂಡು ಆ ಹೊಸಬನು— ಭೆಟ್ಟಿಯಾಗತಕ್ಕ ಕೆಲ ಜನರ ಹೆಸರುಗಳು ಇದರಲ್ಲಿವೆ; ಆದರೆ ನನ್ನ ಹೆಸರು ಮಾತ್ರ ಇರುವದಿಲ್ಲವಲ್ಲ!

ಹಾಗಾದರೆ ನಿಮ್ಮ ಹೆಸರೇನು? ಎಂದು ಬಾಬೂರಾಯನು ಕೇಳಲು ಆ ಹೊಸ ವ್ಯಕ್ತಿಯು ಗಂಭೀರ ಸ್ವರದಿಂದ—

ನನ್ನ ಹೆಸರು ಬಹಾದ್ದರ.

---

## ಬಾಬೂರಾಯನ ಗರ್ವಭಂಗ.

ತನ್ನ ಎದುರಿನ ಖುರ್ಚಿಯ ಮೇಲೆ ಕುಳಿತಂಥ ಅತಿ ಸಾಹಸಿಯಾದ ರಾಕ್ಷಸ ಸದೃಶ ಬಹಾದ್ದರನು ಇವನೇ ಏನು? ಸ್ವತಃ ಅವನೇ ಬಂದು ತನ್ನ ಪರಿಚಯ ಮಾಡಿ ಕೊಟ್ಟಿದ್ದಕ್ಕಾಗಿ ಬಾಬೂರಾಯನಿಗೆ ಹೇಗೆ ಹೇಗೊ ಎನಿಸಿತು. ಅವನ ಧೈರ್ಯ-ಸ್ಥೈರ್ಯಗಳು ಲೋಪವಾದವು. ಹೃದಯವು ಧಡಧಡನೆ ಹಾರಲಾರಂಭಿಸಿತು; ಅವನು ಬೆವೆತದ್ದರಿಂದ ಮುಖದ ಮೇಲೆ ನೀರಿಳಿಯ ಹತ್ತಿತು; ಆದರೆ ಮಾಡುತ್ತಾನೇನು? ಕೈಕಾಲುಗಳು ಮಿಸುಕಾಡು ವಂತಿಲ್ಲ. ಅವನು ಮನದಲ್ಲಿ —ಯಾವ ಧೂರ್ತನು ಇನಸ್ಪೆಕ್ಟರ ಸರದಾರಸಿಂಗನನ್ನು ಗಾಬರಿಗೊಳಿಸಿ ಪದೇ ಪದೆ ಅವಮಾನ ಮಾಡಿದನೋ, ಯಾವ ನನ್ನು ಹಿಡಿಯುವದಕ್ಕಾಗಿ ಇನಸ್ಪೆಕ್ಟರನು ಆಹಾರ-ನಿದ್ರೆಗಳಿಲ್ಲದೆ ಪ್ರಯತ್ನಿಸುತ್ತಿರುವನೋ, ಅಂಥ ನೀಚ, ಕಠೋರ, ಬದ್‌ಮಾಷ ತಸ್ಕರನು ನನ್ನನ್ನು

ಹೀಗೆ ಅಪಮಾನಗೊಳಿಸುವದಕ್ಕಾಗಿ ನನ್ನ ಖುರ್ಚಿಯ ಮೇಲೆ,-ನನ್ನ ಎದುರಿಗೇ ಬಂದು ಕುಳಿತಿರುವನಲ್ಲವೇ? ನಾನು ಸಂಪೂರ್ಣ ಜಾಗ್ರುತನಾಗಿರುವೆನೋ, ಸ್ವಪ್ನಾವಸ್ಥೆಯಲ್ಲಿರುವೆನೋ? ನನ್ನ ಕಣ್ಣು-ಕಿವಿಗಳ ಮೇಲೆ ನನ್ನ ವಿಶ್ವಾಸವಿಲ್ಲವೊ? ಇದೇನಾಶ್ಚರ್ಯ! ಎಂದು ತುಸ ಹೊತ್ತು ವಿಸ್ಮಿತನಾಗಿ ಆಲೋಚಿಸಿದ ಬಳಿಕ, ಮೆಲ್ಲನೆ ಆವನಲ್ಲಿ ವಿಚಾರವುಂಟಾಯಿತು. ಆಗ ಅವನು ಸೌಮ್ಯ ಸ್ವರದಿಂದ ಬಹಾದ್ದರನನ್ನು ಕುರಿತು—ಮಹಾರಾಜ, ನಿಮ್ಮನ್ನು ಕಂಡು ನನಗೆ ಪರಮ ಸಂತೋಷವಾಯಿತು; ಆದರೆ ಸಭ್ಯಗೃಹಸ್ಥರಾದ ತಾವು ಇಲ್ಲಿಯ ತನಕ ಬಂದಿದ್ದು, ತಮಗೆ ಯೋಗ್ಯ ಆದರ-ಸತ್ಕಾರಗಳನ್ನು ಮಾಡಲಿಕ್ಕೆ ಬರುವಂತಿಲ್ಲಾದ್ದರಿಂದ ನನಗೆ ಪರಮ ದುಃಖವೆನಿಸಿದೆ. ನಿಮ್ಮ ಶ್ರಮಪರಿಹಾರಕ್ಕಾಗಿ ಧೂಮ್ರಪಾನವನ್ನಾದರೂ ಮಾಡಿರಿ. ಅಲ್ಲಿಯೇ ಮೇಜಿನ ಮೇಲೆ ಚುರೂಟುಗಳಿವೆ. ಮೆಹೆರ್ಬಾನಿಗಿಯಿಂದ ನನಗೂ ಒಂದು ಕೊಟ್ಟರೆ ಬಹಳ ಉಪಕಾರವಾಗುವದು.

ಬಹಾದ್ದರನು ಕುಳಿತಲ್ಲಿಂದಲೇ ಕೈ ಚಾಚಿ, ಸಿಗರೇಟ ಪೆಟ್ಟಿಗೆಯನ್ನು ಕೈಯಲ್ಲಿ ತಕ್ಕೊಂಡು, ಅದರಲ್ಲಿಯ ಒಂದು ಸಿಗರೇಟ ಹೊರಗೆ ತೆಗೆದು:—ಬಾಬೂರಾವ, ನಿಮ್ಮ ಕೈಕಾಲುಗಳು ಬಂಧಿಸಲ್ಪಟ್ಟಿರುವದರಿಂದ ನೀವು ಧೂಮ್ರಪಾನ ಮಾಡುವದು ಹೇಗೆ? ನಿಮಗೆ ಹೀಗೆ ತ್ರಾಸಕೊಟ್ಟದ್ದರಿಂದ ನನ್ನ ಮನಸ್ಸಿಗೆ ಬಹಳ ವ್ಯಥೆಯಾಗಿದೆ; ಆದರೆ ಮಾಡಲೇನು? ಆತ್ಮರಕ್ಷಣಾರ್ಥವಾಗಿ ಇಂಥ ಕಠೋರ ಉಪಾಯವನ್ನು ಕೈಕೊಳ್ಳಲೇಬೇಕಾಗಿದೆ. ಅನುಭವಿಕರೂ ಚಾಣಾಕ್ಷರೂ ಎನಿಸಿಕೊಂಡ ಪ್ರಸಿದ್ಧರಾದ ನಿಮ್ಮಂಥ ಡಿಟೆಕ್ಟಿವ್ಹರೊಡನೆ ಹೋರಾಡುವದೆಂದರೆ, ಸಾಮಾನ್ಯ ಕೆಲಸವೇ? ನಿಮ್ಮಂಥವರ ಎದುರಿಗೆ ಬರಬೇಕಾದರೆ ಆತ್ಮ ರಕ್ಷಣೆಯ ಉಪಾಯವನ್ನೇನೂ ಕೈ ಕೊಳ್ಳದೆ, ಸ್ವಯಂಭುವಿನಂತೆ ಬಂದು ನಿಲ್ಲುವಷ್ಟು ಮೂರ್ಖನು ನಾನಿರುವದಿಲ್ಲ. ಒಳ್ಳೇದು ಬಾಬೂರಾವ, ಈಗ ನಿಮಗೆ ಸಿಗರೇಟ ಬೇಕಲ್ಲವೇ? ಹಾಗಾದರೆ ಬಂಧಿಸಲ್ಪಟ್ಟ ನಿಮ್ಮ ಎರಡೂ ಕೈಗಳಲ್ಲಿ ಬಲಗೈಯೊಂದನ್ನು ಬಿಚ್ಚಿಬಿಡುವೆನು; ಅದರಿಂದ ನೀವು ನನ್ನನ್ನು ಆಕ್ರಮಣ ಮಾಡಲಾರಿರೆಂದು ನಂಬಿರುವೆನು. ಉಪಕಾರ ಕರ್ತೃವಿನ ಮೇಲೆ ಕೈ ಮಾಡುವಷ್ಟು ಮೂರ್ಖರು ನೀವಿರಲಿಕ್ಕಿಲ್ಲ; ಒಂದು ವೇಳೆ ನೀವು ಅಂಥ ಕೆಲಸಕ್ಕೆ ಪ್ರವೃತ್ತರಾದರೆ ನನ್ನ

ಕೈಯಲ್ಲಿಯೂ ಸಜ್ಜಾದ ಪಿಸ್ತೂಲಿದೆ. ಅದು ಏನೂ ಸಪ್ಪಳ ಮಾಡದೆ, ವೈರಿಯ ಪ್ರಾಣ ಹರಣ ಮಾಡುವದು, ಹಾಗು ಗುರಿ ಹೊಡೆಯುವದರಲ್ಲಿ ನಾನೇನೂ ಕಡಿಮೆಯವನಿಲ್ಲ. ಆದಕಾರಣ ನೀವು ಸುಮ್ಮನೆ ಜೀವಕ್ಕೆರ ವಾಗುವಷ್ಟು ಅಜ್ಞಾನಿಗಳಿಲ್ಲ. ಆದರೆ ನಿಮ್ಮನ್ನು ಹೀಗೆ ಬಂಧಿಸುವದು ಶಿಷ್ಟಾಚಾರಕ್ಕೆ ಒಪ್ಪತಕ್ಕ ಮಾತಲ್ಲ; ಆದರೂ ಕಾರ್ಯ ಸಾಧಕನು ಯಾವಾಗಲೂ ಸರಳತನದಿಂದ ನಡೆಯುತ್ತಿರುವದಿಲ್ಲ. ನಡುನಡುವೆ ವಕ್ರಮಾರ್ಗವನ್ನು ಅನುಸರಿಸಲೇ ಬೇಕಾಗುತ್ತದೆ, ಎಂದು ನುಡಿಯುತ್ತ ಬಾಬೂರಾಯನ ಹತ್ತರ ಬಂದು. ಅವನ ಬಲಕೈಯನ್ನು ಬಿಚ್ಚಿ, ಸಿಗರೇಟ ಕೊಟ್ಟು ತನ್ನ ಸ್ಥಳದ ಮೇಲೆ ಬಂದು ಕುಳಿತುಕೊಂಡ ಬಳಿಕ, ಇಬ್ಬರೂ ಧೂಮ್ರಪಾನ ಮಾಡತೊಡಗಿದರು.

ಸಿಗರೇಟ ಸೇದುವದೇನೂ ಶಿಷ್ಟಸಮ್ಮತವಾದದ್ದಲ್ಲವೆಂಬದು ನಿಜವು; ಆದರೆ ಒಮ್ಮೆ ಚಟ ಬಿದ್ದ ಬಳಿಕ ಅದನ್ನು ತಪ್ಪಿಸುವದು ಜಡವೆನಿಸುವದು ಎಂದು ಬಾಬೂರಾಯನು ಮನದಲ್ಲಿ ಆಲೋಚಿಸುತ್ತ, ಚಕಿತ ಮುದ್ರೆಯಿಂದ ಆ ಆಗಂತುಕನನ್ನು ನೋಡತೊಡಗಿದನು. ಬಾಬೂರಾಯನ ಈ ಇಂಗಿತವನ್ನು ತಿಳಿದ ಆ ಚಾಣಾಕ್ಷ ವ್ಯಕ್ತಿಯು ಬಾಬೂರಾಯನಿಗೆ—ನಾನು ಹೀಗೆ ಅಕಸ್ಮಾತ್ ಪ್ರಾಪ್ತನಾದ್ದರಿಂದ ತಮಗೆ ಆಶ್ಚರ್ಯವೆನಿಸುವದು ಸಹಜವು; ಆದರೆ ತಮಗೆ ಈ ಮೊದಲೇ ನಾನು ಟೆಲಿಫೋನಿನಿಂದ ತಿಳಿಸಿರಲಿಲ್ಲವೇ, ತಮ್ಮ ಮನೆಯಲ್ಲಿಯೇ ತಮಗೆ ಭೆಟ್ಟಿಯಾಗುವೆನೆಂಬದನ್ನು !

ನೀವು ಇಲ್ಲಿ ಹೇಗೆ ಬಂದಿರಿ ? ಎಂದು ಬಾಬೂರಾಯನು ಕೇಳಿದ.

ಅದರಲ್ಲೇನು ? ನಿರ್ಬಾಧವಾಗಿ ಪ್ರವೇಶಿಸಿದೆನು. ಹೊರಬಾಗಿಲ ತೆರೆದು ಒಳಗೆ ಬರುವಾಗ ಹತ್ತಿದ ಕೀಲಿಗಳನ್ನೆಲ್ಲ ತೆಗೆದು, ಇಲ್ಲಿಗೆ ಬಂದೆನು. ಒಟ್ಟಿಗೆ ನಿಮ್ಮ ಮನೆಯ ಎಲ್ಲ ಕೀಲಿಗಳ ಸವತಿ ಕೈಗಳು ನನ್ನ ಬಳಿಯಲ್ಲಿವೆ, ಎಂದು ಬಹಾದ್ದರನು ನುಡಿದನು.

ಈ ಮಾತಿಗೆ ಬಾಬೂರಾಯನು ಹುಬ್ಬುಗಂಟಿಕ್ಕಿ, ಬಹಾದ್ದರನ ಕಡೆಗೆ ನೋಡತೊಡಗಿದನು; ಆದರೆ ಅವನು ಸ್ವಸ್ಥಚಿತ್ತದಿಂದ ಧೂಮ್ರಪಾನ ಮಾಡುವದರಲ್ಲಿಯೇ ತೊಡಗಿದ್ದನು. ಆಗ ಬಾಬೂರಾಯನು ಅರ್ಧ ಸುಟ್ಟ ತನ್ನ

ಸಿಗರೇಟನ್ನು ಬಾಯಲ್ಲಿ ಹಿಡಕೊಂಡು ತನ್ನ ತೆರವಾದ ಕೈಯಿಂದ ಸಮೀಪದಲ್ಲಿರುವ ಗಂಟೆಯನ್ನು ಒತ್ತಿದನು. ಆ ಗಂಟೆಯ ತಂತಿಯು ಮೇಲ್ಮಾಳಿಗೆಯ ಮೇಲಿನ ಫೋಟೋನ ಕೋಣೆಯಲ್ಲಿ ಒಯ್ಯಲ್ಪಟ್ಟಿದ್ದು ಇಲ್ಲಿ ಒತ್ತಿದರೆ ಅಲ್ಲಿ ಧ್ವನಿಗೊಡುತ್ತಿತ್ತು; ಆದರೆ ಈ ದಿನ ಅದು ಕಿವುಡು ಬಿದ್ದು ಹೋಗಿತ್ತು !

ಇವನ ಮನೋಗತ ವಿಚಾರಗಳನ್ನೆಲ್ಲ ಆ ಧೂರ್ತನು ಸಹಜವಾಗಿ ತಿಳಕೊಂಡನು. ಅದರಿಂದ ಅವನು ಬಾಬೂರಾಯನಿಗೆ— ಲಿಲಾವಿನ ಅಂಗಡಿಯಲ್ಲಿ ೨-೩ ತಾಸು ನಿಮ್ಮ ಬಳಿಯಲ್ಲಿಯೇ ಇದ್ದೆನು. ಅಲ್ಲಿ ನಡೆಸಿದ ಕಾರಸ್ಥಾನಗಳಂತೂ ನಿಮಗೆ ತಿಳಿದೇ ಇವೆ! ಅಲ್ಲಿ ಇನ್ನೊಂದು ಕಾರ್ಯ ಸಾಧಿಸಿಕೊಳ್ಳಲು ಸಾಧ್ಯವಾಗಲಿಲ್ಲ! ಅದಕ್ಕಾಗಿ ವ್ಯಸನ ಪಡಬೇಕಾಗಿದೆ. ಪಾಪ! ಆ ಇನಸ್ಪೆಕ್ಟರನು ಗಡಿಯಾರ ನೋಡುವದಕ್ಕಾಗಿ ಸರಪಳಿಯನ್ನು ಹಿಡಿದೆತ್ತಿದಾಗ ಗಡಿಯಾರವು ಕಾಣದೆ ಇರಲು, ಆಗ ಆದ ಅವರ ಮುಖಚರ್ಯೆಯು ವಿಲಕ್ಷಣವಾಗಿತ್ತು. ಅದನ್ನಷ್ಟು ಫೋಟೋ ತೆಗೆದುಕೊಂಡಿದ್ದರೆ ಒಳ್ಳೇ ವಿನೋದವಾಗುತ್ತಿತ್ತು. ಗಡಿಯಾರ ಕಳೆದದ್ದರಿಂದ ಅವರಿಗೆ ಬಹಳ ಕೆಡಕೆನಿಸಿತ್ತು. ನಾನು ವಿನೋದಕ್ಕಾಗಿ ತೆಗೆದಿದ್ದೆನೇ ಹೊರ್ತು, ಅಪಹರಿಸಬೇಕೆಂದಲ್ಲ! ಅಂತೆಯೇ ನಾನು ಅದನ್ನು ಅವರಿಗೆ ತಿರುಗಿ ಮುಟ್ಟಿಸಿದೆನು. ಆದರೆ ಬಾಬೂರಾವ, ಆ ಮುಖ್ಯ ಕರ್ಣಭೂಷಣಗಳನ್ನು ಮಾತ್ರ ಸರ್ವಥಾ ಕೊಡಲಾರೆನು! ಎಂದು ಒಂದು ಮಖಮಲ್ಲಿನ ಪಿಷ್ವಿಯೊಳಗಿಂದ ಆ ಅಲಂಕಾರಗಳನ್ನು ಹೊರಗೆ ತೆಗೆಯಲು, ಅವುಗಳ ನೀಲ ಜ್ಯೋತಿಯು ಆ ಕೋಣೆತುಂಬ ವ್ಯಾಪಿಸಿತು. ಬಾಬೂರಾಯನು ಮಣಿಲಾಲಜಿಯ ಅಂಗಡಿಯಲ್ಲಿ ಅವುಗಳನ್ನು ನೋಡಿದ್ದನಾದ್ದರಿಂದ, ಈಗ ಅವನು ಅವುಗಳನ್ನು ಸಹಜವಾಗಿಯೇ ಗುರ್ತಿಸಿದನು; ಆದರೆ ಮಾಡುತ್ತಾನೇನು ? ಎಲ್ಲವೂ ಭಗ್ನ ಮನೋರಥವೇ ! ಇವುಗಳ ಶೋಧ ಹಚ್ಚಿದರೆ ದೊಡ್ಡ ದೊಡ್ಡ ಇನಾಮುಗಳು ಕೊಡಲ್ಪಡುವವು. ಕಾರಣ ಬಾಬೂರಾವ, ಈಗಲೇ ಇನ್ನೊಮ್ಮೆ ಇವುಗಳನ್ನು ಕಣ್ಣುತುಂಬ ನೋಡಿರಿ! ಮುಂದೆ ಇವು ಯಾರ ದೃಷ್ಟಿಗೂ ಬೀಳಲಾರವು, ಎಂದು ಬಹಾದ್ದರನು ನುಡಿದನು.

ಮುಂದೆ ಕೆಲವು ವೇಳೆ ಬಾಬೂರಾಯನು ಸ್ತಬ್ಧನಾದನು. ಬಹಾ

ದ್ದರನು ತನ್ನ ಕರ್ಣಭೂಷಣಗಳನ್ನು ವ್ಯವಸ್ಥೆಗೊಳಿಸುವವರಲ್ಲಿ ಮಗ್ನನಾಗಿದ್ದನು. ಅದು ತೀರಿದ ಬಳಿಕ ತನ್ನ ರಿಸ್ಟವಾಚದ ಕಡೆಗೆ ನೋಡುತ್ತ–ಬಾಬೂರಾವ, ಇನ್ನು ನಾನು ನಿಮ್ಮ ಅಪ್ಪಣೆ ತಕ್ಕೊಳ್ಳುವೆನು; ಯಾಕಂದರೆ ಇನ್ನು ರಾತ್ರಿಯು ಬಹಳ ಉಳಿದಿಲ್ಲ. ಇದುವರೆಗೆ ನಿಮ್ಮನ್ನು ನಿದ್ದೆಗೆಡಿಸಿ ತೊಂದರೆ ಕೊಟ್ಟಿದ್ದಕ್ಕಾಗಿ ನೀವು ನಿಮ್ಮ ಮನಸ್ಸಿನಲ್ಲಿ ಏನೂ ತಿಳಿದುಕೊಳ್ಳಬಾರದು! ನನ್ನನ್ನು ಹಿಡಿಯುವ ಆಲೋಚನೆಯಲ್ಲಿ ಇಂಥ ನಿಮ್ಮ ಎಷ್ಟೋ ರಾತ್ರಿಗಳು ಕಳೆದಿವೆ; ಹಾಗು ಇನ್ನು ಮುಂಪೆಯೂ ಕಳೆಯತಕ್ಕವಿವೆ!

ನಿಮ್ಮಂಥವರನ್ನು ಹಿಡಿಯುವದಕ್ಕಾಗಿ ಎಷ್ಟು ರಾತ್ರಿಗಳಲ್ಲಾದರೂ ಜಾಗರಣೆ ಮಾಡಲಿಕ್ಕೆ ನಾನು ಸಿದ್ಧನಿರುವೆನು. ನಿಮ್ಮಂಥ ಹೆಸರಾದ ಕಳ್ಳರಿಗೆ ತುರಂಗವಾಸವೇ ಭೂಷಣ; ಹಾಗು ನಿಮ್ಮ ಜನ್ಮವಿರುವ ತನಕ ಅಲ್ಲಿಯೇ ಕಾಲ ಕಳೆಯುವದು ಯೋಗ್ಯ. ಈ ಪ್ರಸಂಗವು ನಿಮಗೆ ಒಂದಿಲ್ಲೊಂದು ದಿನ ನಿಶ್ಚಯವಾಗಿ ಪ್ರಾಪ್ತವಾಗತಕ್ಕದ್ದೇ ಸರಿ! ಎಂದು ಬಾಬೂರಾಯನು ನುಡಿದನು.

ಅದಕ್ಕೆ ಕಿಂಚಿತ್ ಹಾಸ್ಯಯುಕ್ತ ಸ್ವರದಿಂದ ಬಹಾದ್ದರನು— ನಿಮ್ಮ ಮಹತ್ವಾಕಾಂಕ್ಷೆಯು ಬಹು ದೊಡ್ಡದಿದೆ; ಆದರೆ ಅದು ಕೈಗೂಡುವಂತಿಲ್ಲೆಂಬುದಕ್ಕೆ ಮಾತ್ರ ಖೇದವಾಗುತ್ತದೆ. ನಿಮ್ಮಂಥವರ ಹಿಡಿತಕ್ಕೆ ಸಿಕ್ಕು, ತುರಂಗವಾಸದಂಥ ಕಷ್ಟ ಭೋಗಿಸಲು ನಾನು ಅಸಮರ್ಥನಲ್ಲ! ಹಾಗಿದ್ದರೆ ಮುಂಬೈಯೊಳಗಿನ ಪ್ರಸಿದ್ಧ ಡಿಟೆಕ್ಟಿವ್ಹರಾದ ನಿಮ್ಮೆದುರಿಗೆ ಬಂದು ನಿಲ್ಲುತ್ತಿದ್ದಿಲ್ಲ. ನಿಮ್ಮ ಕೆಲಸದಲ್ಲಿ ನೀವು ವಿಶೇಷ ಬುದ್ಧಿಶಾಲಿಗಳಿರುವಿರಿ! ಆದರೆ ನನ್ನನ್ನು ಹಿಡಿಯುವದು ಮಾತ್ರ ನಿಮಗೆ ಎಂದೂ ಸಾಧ್ಯವಿಲ್ಲ! ಸಾಕು. ಇನ್ನು ಇಲ್ಲಿ ಹೆಚ್ಚು ವೇಳೆ ನಿಲ್ಲುವಂತಿಲ್ಲ! ಇನ್ನು ಹೊರಡುವೆನು ಎಂದು ಎದ್ದು ನಿಂತು— ಬಾಬೂರಾವ, ನಿಮ್ಮ ಚುರುಟುಗಳು ಬಹು ಚನ್ನಾಗಿವೆ. ಕಾರಣ ಇನ್ನೊಂದನ್ನು ತಕ್ಕೊಳ್ಳಲಿಕ್ಕೆ ಅಪ್ಪಣೆಯಿರಬೇಕು, ಎನಲು, ಬಾಬೂರಾಯನು ಸಮ್ಮತಿ ಕೊಟ್ಟನು. ಬಳಿಕ ಅವನು ಹೋಗುವಾಗ ಬಾಬೂರಾಯರನ್ನು ಕುರಿತು,— ಬಾಬೂರಾವ, ನಿಮ್ಮನ್ನು ಬಂಧಮುಕ್ತ ಮಾಡಿ ಹೋಗುವದು ನ್ಯಾಯವು. ಅದರಂತೆ ಮಾಡಿದ ಬಳಿಕ

ನೀವು ಐದು ನಿಮಿಷಗಳ ವರೆಗೆ ನನಗೆ ಅವಕಾಶ ಕೊಟ್ಟರೆ ಸಾಕು. ಮುಂದೆ ನಿಮ್ಮ ಇಚ್ಛೆಯಂತೆ ಮಾಡಬಹುದು. ಇದಕ್ಕೆ ನಿಮ್ಮ ಒಪ್ಪಿಗೆ ಯಿದ್ದರೆ ತಿಳಿಸಬೇಕು. ನೀವು ವಚನ ಕೊಟ್ಟ ಮೇಲೆ ವಿಶ್ವಾಸಘಾತ ಮಾಡು ವವರಲ್ಲೆಂಬ ನಂಬಿಗೆ ನನಗಿದೆ. ಒಂದುವೇಳೆ ಅದಕ್ಕೆ ನೀವು ಒಪ್ಪದಿದ್ದರೆ ಮತ್ತೆ ಮೊದಲಿನಂತೆ ಅಸಾವಧಗೊಳಿಸಿ, ಬಂಧಮುಕ್ತ ಮಾಡಬೇಕಾಗು ತ್ತದೆ. ಹೀಗೆ ಮಾಡುವದು ನನ್ನ ಇಚ್ಛೆಯಿಲ್ಲವಾದ್ದರಿಂದ ಏನೆಂಬದಕ್ಕೂ ನೀವು ಸ್ಪಷ್ಟವಾಗಿ ಮಾತಾಡಬೇಕು.

ಬಾಬೂರಾಯನು ಮನಸ್ಸಿನಲ್ಲಿ ಆಲೋಚಿಸತೊಡಗಿದನು. ಬಹಾ ದ್ದರನ ಮಾತು ನಿಜವಾದದ್ದು. ನಾನು ಪುನಃ ಅಸಾವಧನಾದರೆ, ಸಾವ ಧನಾಗುವದು ಎಷ್ಟು ವೇಳೆಗೆಂಬದು ತಿಳಿಯುವಂತಿಲ್ಲವಾದ್ದರಿಂದ ೫ ನಿಮಿಷ ಗಳ ಅವಕಾಶ ಕೊಡಲು ಒಪ್ಪಿಕೊಳ್ಳುವದೇ ಯೋಗ್ಯ, ಯಾಕಂದರೆ ೫ ನಿಮಿ ಷಗಳ ನಂತರ ಇವನನ್ನು ಹಿಡಿಯಲಿಕ್ಕಾಗದಿದ್ದರೂ, ಪ್ರಯತ್ನವನ್ನಾದರೂ ಮಾಡಲಿಕ್ಕೆ ಬಂದೀತು. ಹೀಗೆ ವಿಚಾರ ಮಾಡಿ, ಅವನು ಬಹಾದ್ದರನನ್ನು ಕುರಿತು:—ನಿಮ್ಮ ಮಾತಿಗೆ ಒಪ್ಪಿಗೆಯಿದೆ. ನೀವು ಹೋದ ಬಳಿಕ ೫ ನಿಮಿ ಷಗಳ ವರೆಗೆ ನಾನು ಯಾವ ಪ್ರಯತ್ನಕ್ಕೂ ಹೋಗುವದಿಲ್ಲ; ಆದರೆ ಮುಂದೆ ಮಾತ್ರ ನಿಶ್ಚಯವಾಗಿ ನಿಮ್ಮನ್ನು ಹಿಡಿಯಲಿಕ್ಕೆ ಪ್ರಯತ್ನ ಮಾಡುವೆನು.

ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು! ನನ್ನದೇನೂ ಅಡ್ಡಿ ಯಿಲ್ಲ; ಆದರೆ ನನ್ನನ್ನು ಕೇಳಿದರೆ, ನಿಮ್ಮ ಪ್ರಯತ್ನವು ವ್ಯರ್ಥವಾದದ್ದಿದ್ದು, ವೇಳೆ ಮಾತ್ರ ಸುಮ್ಮನೆ ಕಳೆದು ಹೋಗುತ್ತದೆ, ಮೊದಲೇ ರಾತ್ರಿಯಲ್ಲಿ ನಿದ್ರೆಗೆಟ್ಟಿರುವಿರಿ! ಇನ್ನು ಬೆಳಗುಮುಂಜಾವಿನಲ್ಲಾದರೂ ಸುಖನಿದ್ರೆಗೆಯ್ಯು ವದನ್ನು ಬಿಟ್ಟು, ಚಳಿಯಲ್ಲಿ ತಿರುಗಾಡಿದಿರೆಂದರೆ, ಅದರಿಂದ ಏನೂ ಪ್ರಯೋ ಜನವಾಗದೆ, ಶೀತಬಾಧೆ ಮಾತ್ರ ನಿಮಗಾಗುತ್ತದೆ. ನಾನು ನಿಮಗೆ ಸಿಗು ವದಂತೂ ದೂರತೋಪಾಸ್ತವೆಂದು ನನ್ನ ಅಭಿಪ್ರಾಯ, ಎಂಬದಾಗಿ ಬಹಾ ದ್ದರನು ನುಡಿದನು.

ಕೂಡಲೆ ಅವನು ಬಾಬೂರಾಯನ ಮಂಚದ ಹತ್ತರ ಹೋಗಿ, ಅವನ ಕಾಲಿನ ಹಾಗು ಎಡಗೈಯ ಕಟ್ಟುಗಳನ್ನು ಕಣ್ಣು ಮುಚ್ಚಿ-ಕಣ್ಣು ತೆರೆಯು ವಷ್ಟರಲ್ಲಿ ಬಿಚ್ಚಿ ಬಿಟ್ಟನು.

ಬಾಬೂರಾಯನು ಸಾವಕಾಶವಾಗಿ ಕೈಕಾಲುಗಳನ್ನು ಚಾಚಿ ನರಗಳ ಬಿಗುವನ್ನು ಕಡಿಮೆಮಾಡಿಕೊಳ್ಳಹತ್ತಿದನು. ಆಗ ಬಹಾದ್ದರನು ಅವನ ಸಮೀಪದಲ್ಲಿ ನಿಂತಿದ್ದು, ಇನ್ನು ಹೋಗತಕ್ಕವನು. ಈ ಅವಧಿಯಲ್ಲಿ ಬಾಬೂರಾಯನ ಮನಸ್ಸಿನಲ್ಲಿ:—ಈಗ ಒಮ್ಮೆಲೆ ಇವನ ಮೈ ಮೇಲೆ ಬಿದ್ದು ಹಿಡಿಯಬಹುದಲ್ಲವೇ ? ಹಾಗೆ ಹಿಡಿಯಲಿಕ್ಕಾಗದಿದ್ದರೂ ಒಂದುವೇಳೆ ಇವನ ಮುಸುಕನ್ನಾದರೂ ತೆಗೆದು ಮುಖವನ್ನು ನೋಡಬಹುದು; ಇಲ್ಲವೆ ಈತನ ಬಕ್ಕಣದೊಳಗಿನ ಆಭರಣಗಳನ್ನಾದರೂ ಸಂಪಾದಿಸಬಹುದು. ನಾನು ಹೇಗೂ ಅಲಂಕಾರಗಳನ್ನು ಶೋಧಿಸಿಕೊಡುವ ಬಗ್ಗೆ ಪ್ರತಿಜ್ಞೆ ಮಾಡಿರುವೆನು. ಅನಾಯಾಸವಾಗಿ ಈಗ ಅದು ಸಾಧಿಸುವ ಸುಯೋಗವನ್ನು ಕಳಕೊಳ್ಳಬಹುದೆ? ಇನ್ನು ವಚನಭ್ರಷ್ಟತೆಯಾಗುವದೇ ಬಂತು. ಕಳ್ಳನಿಗೆ ಕೊಟ್ಟ ವಚನವು ಸತ್ಯವಚನವಲ್ಲ! ಯಾವನನ್ನು ಹಿಡಿಯುವದಕ್ಕಾಗಿ ಇನಸ್ಪೆಕ್ಟರನು ನಿದ್ರಾಹಾರಗಳ ಪರಿವೆಯಿಲ್ಲದೆ ಪ್ರಯತ್ನಿಸುವನೋ, ಅಂಥ ಸಾಹಸಿಯಾದ ಕಳ್ಳನು ಪ್ರಸಿದ್ಧ ಡಿಟೆಕ್ಟಿವ್ಹನೆನಿಸಿಕೊಂಡ ನನ್ನ ಮುಂದೆ ನಿಂತಿರಲು, ಇವನನ್ನು ಹಾಗೆಯೇ ಹೋಗಗೊಡುವದು ಮೂರ್ಖತನವಾಗಲಿಕ್ಕಿಲ್ಲವೇ? ಇವನು ಇಲ್ಲಿಂದ ಜಾರಿ ಹೋದನೆಂದರೆ ಮತ್ತೆ ಸಿಗುವನೇ? ಎಂದು ಮುಂತಾಗಿ ಯೋಚಿಸುತ್ತಿರಲು, ಆ ಧೂರ್ತನು ಬಾಬೂರಾಯನನ್ನು ಕುರಿತು—ನನ್ನನ್ನು ಹಿಡಿಯುವ ಆಶೆಯು ನಿಮಗೆ ಅತಿಶಯವಾಗಿರುವದು. ಅದಕ್ಕಾಗಿ ವಚನ ಭಂಗವಾದರೂ ಅಡ್ಡಿಯಿಲ್ಲವೆಂಬದಾಗಿ ನಿಮಗನಿಸಹತ್ತಿದೆ; ಆದರೆ ನಿಮ್ಮಂಥ ಸಭ್ಯಗೃಹಸ್ಥರಿಗೆ ಇದು ಸರಿಯಾದದ್ದಲ್ಲ. ಒಂದು ವೇಳೆ ನೀವು ವಚನ ಪಾಲಿಸದೆ ನನ್ನ ಮೇಲೆ ಏರಿ ಬಂದರೆ, ನನ್ನದೇನೂ ಹಾನಿಯಿಲ್ಲ. ಕ್ಷಣಾರ್ಧದಲ್ಲಿ ನಿಮ್ಮನ್ನು ಈ ಪಿಸ್ತೂಲಿನಿಂದ ಯಮಲೋಕಕ್ಕಟ್ಟಿಬಿಡುವೆನು. ಈ ನನ್ನ ಪಿಸ್ತೂಲಿನ ಸಪ್ಪಳವು ಎಷ್ಟು ಮಾತ್ರವೂ ಆಗುವದಿಲ್ಲ. ಇನ್ನು ನನಗೆ ಅಪ್ಪಣೆ ಕೊಡಿರಿ. ನಿಮ್ಮ ಗಡಿಯಾರ ನೋಡಿರಿ, ಸರಿಯಾಗಿ ಐದು ನಿಮಿಷಗಳವರೆಗೆ ಯಾವ ಪ್ರಯತ್ನಕ್ಕೂ ಹೋಗಬೇಡಿರಿ, ಬಳಿಕ ಬೇಕಾದದ್ದನ್ನು ಮಾಡಬಹುದು. 'ಇನ್ನೊಮ್ಮೆ ನಿಮ್ಮ ಭೆಟ್ಟಿಯಾಗುವ ಆಶೆಯಿದೆ. ನಾನು ಏನೇನು ಮಾಡತಕ್ಕವನಿರುವೆನೋ, ಅವುಗಳನ್ನೆಲ್ಲ ನಿಮಗೆ ತಿಳಿಸುತ್ತಿರುವೆನು, ಎಂದು ನುಡಿದವನೇ, ಸ್ವಲ್ಪಾದರೂ ಕಾಲಸಪ್ಪಳ ಮಾಡದೆ ಅಲ್ಲಿಂದ

ಹೊರಟು ಹೋದನು.

## ಕಳ್ಳನೇ ಡ್ರಾಯ್ವ್ಹರನು !

ಕೆಲವು ವೇಳೆಯ ವರೆಗೆ ಭ್ರಾಂತನಂತೆ ಕುಳಿತುಕೊಂಡ ಬಳಿಕ ಬಾಬೂರಾಯನು ಗಡಿಯಾರವನ್ನು ಕೈಯಲ್ಲಿ ತಕ್ಕೊಂಡನು. ಮೂರು ಬಡೆಯಲಿಕ್ಕೆ ಐದು ನಿಮಿಷ ಕಡಿಮೆಯಿತ್ತು. ಮೂರು ಬಡಿದ ಮೇಲೆ ಬಹಾದ್ದರನ ಶೋಧಕ್ಕೆ ಅಡ್ಡಿಯಿಲ್ಲವಷ್ಟೆ? ಎಂದು ಆಲೋಚಿಸುವಷ್ಟರಲ್ಲಿ ಐದು ನಿಮಿಷಗಳಾದವು. ಬಳಿಕ ಬಾಬೂರಾಯನು ಕಾಲಲ್ಲಿ ಬೂಟು ಹಾಕಿಕೊಂಡು ಮೈಯಲ್ಲಿ ಕೋಟು ತೊಟ್ಟುಕೊಂಡನು. ತಲೆಗೆ ಟೊಪ್ಪಿಗೆ ಹಾಕಿದವನೇ ಹೊರಬಿದ್ದು ನಡೆದನು. ಎಲ್ಲ ಕಡೆಗೂ ನಿದ್ರಾದೇವಿಯ ಸಾಮ್ರಾಜ್ಯವೇ ನೆಲೆಗೊಂಡಿತ್ತು. ಛೋಟೂನಂತೂ ಗೊರಕೆ ಹೊಡೆಯುತ್ತಿರಬಹುದೆಂದು ಅವನನ್ನು ಎಬ್ಬಿಸುವ ಗೊಡವೆಗೆ ಹೋಗದೆ, ಒಬ್ಬನೇ ಹೊರಟನು. ತನ್ನ ಮನೆಯ ಕಾಂಪೌಂಡಿನ ಬಾಗಿಲ ಬಳಿ ನಿಂತುಕೊಂಡು ಸುತ್ತುಕಡೆಯಲ್ಲೂ ನೋಡತೊಡಗಿದನು. ಬೀದಿಯಲ್ಲಿ ಗದ್ದಲವೇ ಇಲ್ಲ. ಬೆಳಕಾದರೂ ಅಷ್ಟು ಸ್ವಚ್ಛವಾಗಿರಲಿಲ್ಲ. ಇಂಥ ಸ್ಥಿತಿಯಲ್ಲಿ ಬಹಾದ್ದರನು ಎತ್ತ ಕಡೆಗೆ ಹೋಗಿರಬಹುದು? ಎಂದು ಸುಮ್ಮನೆ ಆಲೋಚಿಸುತ್ತ ನಿಂತುಕೊಂಡನು. ತಂಪುಗಾಳಿ ಸಿಳ್ಳನೇ ಬೀಸಹತ್ತಿದ್ದರಿಂದ, ಬಾಬೂರಾಯನು ನಡುಗಹತ್ತಿದನು.

ಇನ್ನು ಹೇಗೆ ಮಾಡಬೇಕೆಂದು ಆಲೋಚಿಸುವಷ್ಟರಲ್ಲಿ, ದೂರದಲ್ಲಿ ಮೋಟರಿನ ಸಪ್ಪಳವಾಗಹತ್ತಿತು. ಅವನು ಲಕ್ಷ್ಯವಿಟ್ಟು ಅದನ್ನೇ ನೋಡುತ್ತ ನಿಂತುಕೊಂಡನು. ಅಷ್ಟರಲ್ಲೊಂದು ಮೋಟಾರ ಸಮೀಪಕ್ಕೆ ಬಂತು. ಆಗ ಬಾಬೂರಾಯನು ಅದರ ಹತ್ತಿರಕ್ಕೆ ಹೋಗಿ, ಕೈಸನ್ನೆಯಿಂದ ಅದನ್ನು ನಿಲ್ಲಿಸಲಿಕ್ಕೆ ತಿಳಿಸಿದನು. ಮೋಟರಿನಲ್ಲಿ ಡ್ರಾಯ್ವ್ಹರನ ಹೊರತು ಬೇರೆ ಯಾರೂ ಇದ್ದಿಲ್ಲ. ಬಾಬೂರಾಯನು ಡ್ರಾಯ್

ವ್ಹರನನ್ನು ಕುರಿತು— ದಾರಿಯಲ್ಲಿ ತುಸು ಎತ್ತರವುಳ್ಳ ಬಿಳೀ ಡ್ರೆಸ್ಸಿನ ಮನುಷ್ಯನೊಬ್ಬನು ಕೂಡಿದನೋ? ಎಂದು ಕೇಳಲು, ಅಲ್ಲಿ ಬಲಗಡೆಗೆ ದಾರಿ ಒಡೆದಲ್ಲಿ ಒಬ್ಬನು ಒಳ್ಳೇ ವೇಗದಿಂದ ಹೋಗುತ್ತಿದ್ದನು. ಅವನ ಮೈಮೇಲೆ ಎಚ್ಚರವಿದ್ದಂತೆ ಕಾಣಲಿಲ್ಲ; ಯಾಕಂದರೆ ನಾನು ಎಷ್ಟು ಸಾವಧನಾಗಿದ್ದರೂ, ಅವನು ತೀರ ಮೋಟರ ಬಳಿಯಲ್ಲೇ ಹಾಯ್ದು ಹೋದನು. ನೀವಂದಂತೆ ಅವನ ಡ್ರೆಸ್ಸು ಇದ್ದರೂ ಇರಬಹುದು ಎಂದು ಡ್ರಾಯವ್ಹರನು ನುಡಿಯಲು, ಬಾಬೂರಾಯನು ಅವನೇ ಬಹಾದ್ದರನಿರ ಬಹುದೆಂದು ಸಂಶಯಗೊಂಡನು; ಮತ್ತು ಡ್ರಾಯವ್ಹರನನ್ನು ಕುರಿತು— ನಾನು ಅವನನ್ನು ಹಿಡಿಯುವದು ಅವಶ್ಯವಿದೆ. ಕಾರಣ ಈಗಿಂದೀಗಲೇ ಮೋಟರನ್ನು ತಿರುಗಿಸುವದಲ್ಲದೆ, ಮುಂದೆ ನನ್ನಿಚ್ಛೆಯಂತೆ ಬೇಕಾದತ್ತ ತಿರುಗಾಡಿ ಬಂದರೆ, ನಿನಗೆ ಇನಾಮು ಕೊಡುವೆನು. ನನ್ನ ಹೆಸರು ಬಾಬೂರಾವ, ಎಂದು ನುಡಿಯಲು, ಅವನು ಸುಮ್ಮನೆ ಮೋಟರು ತಿರುಗಿ ಸಿದನು. ಕೂಡಲೆ ಬಾಬೂರಾಯನು ಅವರ ಮೇಲೆ ಕುಳಿತನು. ಮೋಟರು ಭರದಿಂದ ಸಾಗಿತು. ಎರಡೂ ಬದಿಯಲ್ಲಿ ಸೂಕ್ಷ್ಮದೃಷ್ಟಿಯಿಂದ ನೋಡುತ್ತ ಬಾಬೂರಾಯನು ಕುಳಿತುಕೊಂಡನು.

ತುಸು ವೇಳೆಯಲ್ಲಿ ಎರಡು ದಾರಿಗಳು ಬಂದವು. ಅಲ್ಲಿ ಶೋಧಿಸ ಲಾಗಿ ಯಾರ ಸುಳುವೂ ಇದ್ದಿಲ್ಲ. ಅಲ್ಲಿಂದ ಮುಂದೆ ಡ್ರಾಯವ್ಹರನು ಬಾಬೂರಾಯನ ಇಚ್ಛೆಯಂತೆ ಮೋಟರ ಸಾಗಿಸಹತ್ತಿದನು. ದಾರಿಯಲ್ಲಿ ಯಾರನ್ನಾದರೂ ಕಂಡರೆ ತೀರಿತು; ಕೂಡಲೆ ಬಾಬೂರಾಯನು ಆತನ ಹತ್ತರ ಹೋಗಿ ನೋಡುತ್ತಿದ್ದನು. ಎಲ್ಲ ಕಡೆಗೂ ನಿರಾಶೆಯಾಯಿತು. ಚಳಿಯು ಮಾತ್ರ ವಿಶೇಷವಾಗಿ ಬಾಧಿಸತೊಡಗಿತು. ಆಗ ಬಾಬೂರಾಯನು ಒಂದು ಚುರೂಟು ತೆಗೆದು ಸೇದುತ್ತ ಮನದಲ್ಲಿ ಆಲೋಚಿಸತೊಡಗಿದನು. ಬಹಾದ್ದರನು ನನ್ನ ಕಣ್ಣಲ್ಲಿ ಮಣ್ಣುಹಾಕಿ ಎತ್ತ ಜಾರಿದನೋ ಜಾರಿದನು! ಇನ್ನು ಅವನು ಸಿಗುವ ಸಂಭವವಿಲ್ಲ. ಈ ಭಯಂಕರ ಚಳಿಯಲ್ಲಿ ವ್ಯರ್ಥ ವಾಗಿ ಶ್ರಮಪಟ್ಟಂತಾಯಿತು, ಎಂದು ವಿಚಾರಿಸುತ್ತಿದ್ದನು. ಇನಾಮಿನ ಆಶೆಯಿಂದ ಡ್ರಾಯವ್ಹರನು ಮಾತ್ರ ಅವಕಾಶವಿಲ್ಲದೆ ಮೋಟರು ಸಾಗಿಸು ತ್ತಿದ್ದನು. ಅಷ್ಟರಲ್ಲಿ ಬೆಳಗಾಗ ಬಂತು. ಇದು ವರೆಗೆ ಸ್ತಬ್ಧವಾಗಿದ್ದ

ಮುಂಬಾಪುರಿಯು ಈಗ ಜಾಗೃತಾವಸ್ಥೆಯನ್ನು ಹೊಂದಿತು ಉದ್ಯೋಗಿಗಳಾದ ಜನರು ಎದ್ದು ಲಗುಬಗೆಯಿಂದ ಕೆಲಸಕ್ಕೆ ಸಾಗಿದರು. ಎತ್ತ ನೋಡಿದತ್ತ ಕೆಲವರು ಕಾಲುನಡಿಗೆಯಿಂದ ಕೆಲವರು ಸಾಯಕಲ್ ಮೇಲೆ, ಕೆಲವರು ಮೋಟರ-ಟ್ರಾಮುಗಳಲ್ಲಿ ಕುಳಿತು ಸಂಚರಿಸುತ್ತಿದ್ದರು. ಇಷ್ಟರಲ್ಲಿ ಕುಲಾಬಾ-ರೋಡ ಎಂಬ ಓಣಿ ಬಂತು. ಡ್ರಾಯವ್ಹರನು ಮೋಟರನ್ನು ಸಾವಕಾಶವಾಗಿ ಸಾಗಿಸಹತ್ತಿರಲು, ಬಾಬೂರಾಯನು ಅವನನ್ನು ಕುರಿತು— ಅವನ ಶೋಧವು ಇಷ್ಟಕ್ಕೆ ಸಾಕು, ನಮ್ಮ ಮನೆಯ ಕಡೆಗೆ ಮೋಟರ ತಿರುಗಿಸು, ಎಂಬೊಡನೆಯೇ ಮೋಟರ ತಿರುಗಿಸಿ, ಕ್ಷಣಾರ್ಧದಲ್ಲಿ ಅದನ್ನು ಬಾಬೂರಾಯರ ಮನೆಯ ಮುಂದೆ ತಂದು ನಿಲ್ಲಿಸಿದನು.

ಆಗ ಬಾಬೂರಾಯನು ಅರ್ಧಸುಟ್ಟ ಸಿಗರೇಟನ್ನು ಕೆಳಗೆ ಚಲ್ಲಿ, ಮೋಟಾರದಿಂದ ಇಳಿದನು. ಆಗ ಡ್ರಾಯವ್ಹರನು ಬಾಬೂರಾಯನಿಗೆ:— ಮಹಾರಾಜ, ನನ್ನ ಕೆಲಸದಲ್ಲಿ ನಾನು ಎಳ್ಳಷ್ಟೂ ಮನಸರಿ ಮಾಡಿರುವದಿಲ್ಲ; ಆದರೂ ಶೋಧವಾಗಲಿಲ್ಲ. ಇದಕ್ಕಾಗಿ ನಿಮಗೆ ಪರಮವಿಷಾದವೆನಿಸಿದ್ದನ್ನು ಕಂಡು ನನಗೂ ದುಃಖವೆನಿಸಿದೆ; ಆದರೆ ಇದರಲ್ಲಿ ನನ್ನದೇನೂ ತಪ್ಪಿಲ್ಲ. ನನಗೆ ಅಪ್ಪಣೆ ಕೊಡಿಸಬೇಕು, ಎಂದನು.

ನನಗಾದ ದುಃಖವನ್ನು ಕಂಡು ನಿನಗೆ ವ್ಯಸನವಾಗಿರಬಹುದು: ಆದರೆ ನನ್ನ ದುಃಖದ ಕಲ್ಪನೆಯು ನಿನಗೆ ಹೇಗಾದೀತು? ನೀನು ನನ್ನ ಕೆಲಸವನ್ನು ಚನ್ನಾಗಿ ಮಾಡಿದುದು ನಿಜವು, ಎಂದು ಅನ್ನುತ್ತ ಬಾಬೂರಾಯನು ಹತ್ತು ರೂಪಾಯಿಯ ಒಂದು ನೋಟನ್ನು ತೆಗೆದು ಮೋಟರಿನವನ ಕೈಗಿತ್ತನು. ಆಗ ಅವನು ಸಂತೋಷದಿಂದ ಬಾಬೂರಾಯನಿಗೆ ಸಲಾಂ ಮಾಡಿ:—ರಾವ ಸಾಹೇಬ, ಇದು ನನ್ನ ಸ್ವಂತದ ಗಾಡಿಯಿದೆ. ನಿಮಗೆ ಕೆಲಸ ಬಿದ್ದಾಗ ತಿಳಿಸಿದರೆ, ನನ್ನ ಸಾವಿರ ಕೆಲಸಗಳನ್ನಾದರೂ ಬದಿಗಿಟ್ಟು ಕೂಡಲೆ ನಿಮ್ಮ ಕಡೆಗೆ ಬರುವೆನು. ಇದೊಂದು ನನ್ನ ಪತ್ತೆಯ ಕಾರ್ಡು ನಿಮ್ಮ ಬಳಿಯಲ್ಲಿರಲಿ, ಎಂದಂದು ಒಂದು ಸಣ್ಣ ಕಾರ್ಡನ್ನು ತೆಗೆದು ಬಾಬೂರಾಯನ ಕೈಗಿತ್ತು, ಮತ್ತೊಮ್ಮೆ ಸಲಾಂ ಹೊಡೆದು, ಹಾರ್ನ ಮಾಡುತ್ತ ತನ್ನ ಮೋಟರನ್ನು ವೇಗವಾಗಿ ಬಿಟ್ಟನು.

ಇತ್ತ ಬಾಬೂರಾಯನು ಆ ಕಾರ್ಡು ಕೈಯಲ್ಲಿ ತಕ್ಕೊಂಡು, ಒಳಗೆ ಬಂದು ತನ್ನ ಆಫೀಸ ರೂಮಿನಲ್ಲಿಯ ಆರಾಮಿ ಖುರ್ಚಿಯ ಮೇಲೆ ಅಡ್ಡಾದನು. ಅವನ ತಲೆಯಲ್ಲಿ ಬಹಾದ್ದರನ ವಿಷಯದ ವಿಚಾರಗಳು ಒಂದೇ ಸಮನೆ ತಾಕಲಾಡುತ್ತಿದ್ದವು. ಇಷ್ಟೊತ್ತಿನವರೆಗೆ ತಿರುಗಾಡಿ ದೊರಕಿಸಿದ್ದೇನಂದರೆ, ಯಥೇಷ್ಟವಾದ ಚಳಿ! ಹೀಗೆಯೇ ಅವನು ನನ್ನನ್ನು ಠಕ್ಕಿಸುತ್ತ ಅವಮಾನಗೊಳಿಸುತ್ತ ಹೋದರೆ, ಇದಕ್ಕೆ ಮುಂದೆ ಉಪಾಯವೇನು? ಈ ನನ್ನ ದುರವಸ್ಥೆಯು ಇನಸ್ಪೆಕ್ಟರ ಸರದಾರಸಿಂಗ ಮೊದಲಾದವರಿಗೆ ಗೊತ್ತಾದರೆ, ಅವರು ಬಿದ್ದು ಬಿದ್ದು ನಗಲಿಕ್ಕಿಲ್ಲವೆ? ಇಲ್ಲಿಯವರೆಗೆ ಅವರಿಗಾದ ದುರವಸ್ಥೆಯನ್ನು ಕಂಡು ನಾನು ನಗುತ್ತಿದ್ದೆನು. ಈಗ ಅದಕ್ಕೆ ವಿಪರೀತವಾದ ಕಾಲವುಂಟಾಗಿ, ಇಂಥ ಹೀನಾವಸ್ಥೆಯು ನನ್ನ ಪಾಲಿಗೆ ಬಂದಿರಲು, ನಗಬೇಡೆಂದರೆ ಕೇಳುವವರಾರು? ಹೀಗೆಯೇ ಅವನು ಎಷ್ಟು ಸಾರೆ ವಂಚಿಸುವನೋ ತಿಳಿಯದಾಗಿದೆ. ಅವನು ಸ್ಪಷ್ಟವಾಗಿ ಹೇಳಿರುವನಲ್ಲವೆ ನನ್ನನ್ನು ಹಿಡಿಯುವದು ನಿಮ್ಮಿಂದ ಸಾಧ್ಯವಿಲ್ಲೆಂದು! ಅವನು ಇನ್ನು ನಾಲ್ಕೆಂಟು ದಿನಗಳಲ್ಲಿ ಹಿಡಿಯಲ್ಪಡದಿದ್ದರೆ, ಮುಂದೆ ಅವನು ನಮಗೆ ಸಿಗುವದಿಲ್ಲವೆಂದೇ ನನಗನಿಸುತ್ತದೆ. ಆ ಆಭರಣಗಳಂತೂ ಎಲ್ಲಿ ಮಾಯವಾಗುವವೋ ಏನೋ? ಇಂಥ ಅದ್ಭುತ ಕಳ್ಳನು ನಮಗೆ ಕೂಡಿದ್ದು ಇದೇ ಮೊದಲು! ಅವನ ಒಂದೊಂದೇ ಕೃತಿಗಳು ನೆನಪಾದಂತೆ ಆಶ್ಚರ್ಯವಾಗುತ್ತ ಹೋಗುವದು. ಅವನ ಮಧುರ ಭಾಷಣ, ಕೋಮಲ ಸ್ವರ ಇವುಗಳನ್ನು ಕೇಳಿದರೆ ಇಂಥ ಸಭ್ಯಗೃಹಸ್ಥನಿರುವನೋ ಎನಿಸುವದು! ಆದರೆ ಅತನ ಕೃತಿಯು ನೆನಪಾದರೆ ಮಾತ್ರ ಅವನು ನಿಜವಾಗಿಯೂ ಸೈತಾನನೇ ಇರುವನೆಂದು ತರ್ಕಿಸಬಹುದಾಗಿದೆ; ಎಂದು ಒಂದಲ್ಲ-ಎರಡಲ್ಲ ಹಲವು ವಿಚಾರಗಳು ತಾಕಲಾಡುತ್ತಿರಲು, ಅವನಿಗೆ ಗ್ಲಾನಿಬಂದಂತಾಯಿತು. ಅದರಿಂದ ಅವನು ಇನ್ನು ಸ್ವಲ್ಪ ವೇಳೆ ಮಲಗುವದೇ ಉತ್ತಮವೆಂದು ಎದ್ದು ತನ್ನ ಹಾಸಿಗೆಯ ಹತ್ತರ ಹೋದನು. ಅಲ್ಲಿ ಬಹಾದ್ದರನಿಂದ ತನ್ನನ್ನು ಬಂಧಿಸಲ್ಪಟ್ಟ ಹಗ್ಗವು ಹಾಗೇ ಬಿದ್ದಿತ್ತು. ಅದನ್ನು ಕಂಡು ಮನದಲ್ಲಿ ಅವನ ವಿಷಯವಾಗಿ ಮತ್ತಿಷ್ಟು ಆಲೋಚಿಸುತ್ತ ತನ್ನ ಹಾಸಿಗೆಯ ಮೇಲೆ ಬಿದ್ದುಕೊಳ್ಳಬೇಕೆನ್ನುವಷ್ಟರಲ್ಲಿ, ಇಲ್ಲಿಯ ವರೆಗೆ ಹಾಗೆಯೇ ಕೈಯಲ್ಲಿ ಹಿಡಿದಿದ್ದ ಆ ಕಾರ್ಡಿನ ಕಡೆಗೆ ದೃಷ್ಟಿಹೋಗಲು ಅವನು

ಒಮ್ಮಿಂದೊಮ್ಮೆಲೆ ಮೆಟ್ಟೆಬಿದ್ದನು! ಗ್ಲಾನಿಯೆಲ್ಲ ಹೋಗಿ, ಅವನು ಸಿಟ್ಟಿಗೆ ಳಾದನು. ಹೀಗೆ ಅವನನ್ನು ಗಾಬರಿಗೊಳಿಸುವಂಥ ಸಂಗತಿಯು ಆ ಪುಟ್ಟ ಕಾರ್ಡಿನಲ್ಲೇನಿರಬಹುದೆಂದು ನಮ್ಮ ವಾಚಕರಾದರೂ ವಿಸ್ಮಿತರಾಗಿರಬ ಹುದು; ಆದರೆ ಅದರಲ್ಲಿ ವಿಶೇಷವೇನೂ ಇರದೆ, ಇಷ್ಟೇ ಬರೆದಿತ್ತು—

ನಿಮ್ಮ ಬಹಾದ್ದರ

ಆ ಕಾರ್ಡಿನಲ್ಲಿ ಬಹಾದ್ದರನ ಹೆಸರನ್ನು ನೋಡಿದಾಗ್ಯೂ ಅವನ ಕಣ್ಣ ಮೇಲೆ ಅವನ ವಿಶ್ವಾಸವು ಕೂರಲೊಲ್ಲದು. ಒಮ್ಮೆಯಲ್ಲ, ನಾಲ್ಕೆಂಟು ಸಾರೆ ನೋಡಿದರೂ ಮನಸ್ಸಿನ ತೃಪ್ತಿಯಾಗಲಿಲ್ಲ! ಕಾರ್ಡನ್ನು ನೋಡಿದಾ ಗಲೇ ಆ ಡ್ರಾಯ್‌ವ್ಹರನೇ ಬಹಾದ್ದರನೆಂಬದು ಬಾಬೂರಾಯನಿಗೆ ಗೊತ್ತಾ ಯಿತು. ಬಹಾದ್ದರನು ನನ್ನ ಸಮಾಚಾರಕ್ಕೆ ಬರುವ ಮೊದಲೇ ಮೋಟ ರಿನಲ್ಲಿ ಬಂದಿದ್ದು, ಅವನ್ನು ಹೊರಗೆ ನಿಲ್ಲಿಸಿ ಒಳಗೆ ಬಂದಿರಬಹುದು. ತಿರುಗಿ ಹೋಗುವಾಗ ಅದೇ ಮೋಟರಿನಲ್ಲಿ ಹೋಗಿ, ೫ ನಿಮಿಷದಲ್ಲಿ ಈ ಪ್ರಕಾರ ವೇಷಾಂತರಿಸಿಕೊಂಡು ಬಂದು ನನ್ನನ್ನು ಚನ್ನಾಗಿ ಠಕ್ಕಿಸಿದನು. ಬಹಾ ದ್ದರನ ಮೋಟರಿನಲ್ಲೆಯೇ ಕುಳಿತು, ಅವನನ್ನೇ ಹುಡುಕುವದಕ್ಕಾಗಿ ಊರ ತುಂಬ ಅಡ್ಡಾಡಿ ಬಂದೆನಲ್ಲ!! ಇವನೇ ಬಹಾದ್ದರನೆಂಬದು ನನಗೆ ಸ್ವಲ್ಪ ದರೂ ಹೊಳೆಯಬಾರದೇ? ಅವನು ನನ್ನ ಸಂಗಡ ಎಂಥ ಚಾತುರ್ಯ ದಿಂದ ವರ್ತಿಸಿದನಲ್ಲ! ಹೀಗಾದರೆ ಅವನನ್ನು ಹಿಡಿಯುವದು ಅಶಕ್ಯವೇ ಸರಿ! ಅವನು ನನಗಿಂತ ನೂರಾರು ಪಟ್ಟು ಜಾಣನಿರುವನು; ಆದರೆ ಕಳ್ಳನಾ ದ್ದರಿಂದ ಅವನನ್ನು ಹಿಡಿಯುವದು ನನ್ನ ಕರ್ತವ್ಯ. ಆತನ ಮೋಟರಿನ ನಂಬರನ್ನು ಕೂಡ ನಾನು ನೋಡಿಕೊಳ್ಳಬಾರದೇ? ಎಂಥ ಮೂರ್ಖತನ ವಾಯಿತಲ್ಲ! ಗಾಡಿಯ ಬಣ್ಣದ ಮೇಲಿಂದ ಅದನ್ನು ಗುರ್ತಿಸಲಸಾಧ್ಯವು. ಯಾಕೆಂದರೆ ಈ ಪಟ್ಟಣದಲ್ಲಿ ಅಂಥ ಬಣ್ಣದ ಮೋಟರಗಳು ಸಾವಿರಾರಿರಬ ಹುದು. ಅಂದಬಳಿಕ ಅದನ್ನು ಗುರ್ತಿಸುವದು ಹೇಗೆ? ಬುದ್ಧಿ ಕಳೆದುಕೊಂಡು ಹುಡುಕಾಡಿದರೆ ಸಿಗುವದೇನು? ಅವನು ನನ್ನೊಡನೆ ಮೋಟರಿನಲ್ಲಿ ಕುಳಿತು ಯಥೇಚ್ಛ ತಿರುಗಾಡಿ, ಮೇಲೆ ನನ್ನಿಂದ ೧೦ ರೂಪಾಯಿ ಇನಾಮನ್ನು ಕೂಡ ಪಡೆದು, ತನ್ನ ಬಹಾದ್ದರಿಕೆಯ ಪರಮಾವಧಿಯನ್ನು ತೋರಿಸಿದನು.

ಸ್ಥೈ! ಸ್ಥೈ! ಅವನು ನಿಜವಾಗಿಯೂ ಬಹಾದ್ದರನೇ ಅಹುದು! ಅವನು ಇದರಂತೆ ಇನ್ನು ಎಷ್ಟುಸಾರೆ ನನ್ನನ್ನು ವಂಚಿಸುವನೋ ವಂಚಿಸಲಿ! ಏನೇನು ಹೊಸ ಹೊಸ ಯುಕ್ತಿಗಳನ್ನು ಒಡ್ಡುವನೋ-ಒಡ್ಡಲಿ! ನಾನು ಅವೆಲ್ಲವುಗಳನ್ನು ಸಮಾಧಾನದಿಂದ ಸಹಿಸಿಕೊಂಡು, ಆವನನ್ನು ಹಿಡಿಯಲಿಕ್ಕೆ ಪ್ರಯತ್ನಿಸುವೆನು. ಇಷ್ಟೇ ಅಲ್ಲ, ಎಷ್ಟು ಶ್ರಮವಹಿಸಿಯಾದರೂ ಅವನನ್ನು ಹಿಡಿದೇ ತೀರುವೆನು. ಇಂಥವನನ್ನು ಹಿಡಿಯಲಿಕ್ಕಾಗದಿದ್ದರೆ, ನನ್ನ ಪೌರುಷವಾದರೂ ಏನು? ಸರದಾರಸಿಂಗ ಮೊದಲಾದವರಂತೆ ನಾನೂ ಒಬ್ಬನಾಗುವೆನು; ಆದರೆ ನಾನು ಹಾಗೆಂದಿಗೂ ಕೈಲೂರಲಿಕ್ಕಿಲ್ಲ. ಇದರಲ್ಲಿ ನನ್ನ ಪರೀಕ್ಷೆಯೇ ಆಗಿ ಹೋಗಲಿ! ಅವನನ್ನು ಹಿಡಿಯದಿದ್ದರೆ ನಾನು ನನ್ನ ಈ ಉದ್ಯೋಗವನ್ನೇ ಬಿಟ್ಟುಬಿಡುವೆನು! ಬಿಡುವದಾದರೂ ಏನು? ಸಹಜವಾಗಿಯೇ ನಾನು ಅಪಾತ್ರನೆಂದು ನಿರ್ಣಯಿಸಲ್ಪಡುವೆನು, ಎಂಬಿವೇ ಮೊದಲಾದ ಆತ್ಮಪೌರುಷದ ಭಾವೀ ಸುಖಮಯ ವಿಚಾರಗಳಲ್ಲಿ ಆತನು ಮಗ್ನನಾಗಿರಲು, ಅವನಿಗೆ ತೂಕಡಿಕೆ ಬಂತು! ಆಗ ಅವನು ತನ್ನ ಹಾಸಿಗೆಯ ಮೇಲೆ ಸ್ವಸ್ಥವಾಗಿ ಅಡ್ಡಾಗಿಬಿಟ್ಟನು. ಹೊರಗೆ ನಿಚ್ಚಳವಾದ ಪ್ರಕಾಶ ಬಿದ್ದದ್ದು ಕೂಡ ಆತನ ಲಕ್ಷ್ಯಕ್ಕೆ ಬರಲಿಲ್ಲ.

## ಇವರು ಇಲ್ಲಿಗೆ ಹೇಗೆ ಬಂದರು!

ಮರುದಿನ ಆರು ತಾಸಿಗೆ ಬಾಬೂರಾಯನು ಎಚ್ಚತ್ತ ನಂತರ ಉಪಹಾರವನ್ನು ಮಾಡಿದನು. ಛೋಟೂಸಿಂಗನು ಬಹು ವಿನಯದಿಂದ- ಈ ದಿನ ಏಳಲಿಕ್ಕೆ ಇಷ್ಟು ತಡವೇಕಾಯಿತೆಂದು ಕೇಳಲು, ಬಾಬೂರಾಯನು, ರಾತ್ರಿಯಲ್ಲಿ ನಡೆದ ಸಂಗತಿಯನ್ನು ಒಂದೂ ಉಳಿಯದಂತೆ ಆತನಿಗೆ ತಿಳಿಸಿದನು. ಅದನ್ನು ಕೇಳಿ ಛೋಟೂವು ಗಾಬರಿಯಾಗಿ ದಿಕ್ಕುಗಾಣದೆ ನಿಂತುಕೊಂಡನು. ಬಳಿಕ ಬಾಬೂರಾಯನು ನೋಟ ಬುಕ್ಕನ್ನು ನೋಡಿ, ಆ ದಿನ ಮಾಡಬೇಕಾದ ಅವಸರದ ಕೆಲಸಕ್ಕಾಗಿ ಬೇರೆ ಕಡೆಗೆ ಹೊರಟು ಹೋದನು. ಮತ್ತು ಹೋಗುವಾಗ ಛೋಟೂವಿಗೆ ಬೇರೊಂದು ಕೆಲಸ ಹೇಳಿ ಹೋಗಿ

ನೊಡನೆ ಅದೇ ಗಲ್ಲಿಯಲ್ಲಿ ತುಸ ಮುಂದಕ್ಕೆ ಹೋಗುವಷ್ಟರಲ್ಲಿ, ಒಂದು ಭವ್ಯವಾದ ಮಹಾದ್ವಾರವುಳ್ಳ ಮಂದಿರವು ಅವರಎದುರಿನಲ್ಲಿ ಕಾಣಿಸಹತ್ತಿತು. ಆಗ ಬಾಬೂರಾಯನು ಬೊಟ್ಟು ಮಾಡಿ ಅದನ್ನು ಭೋಟೂಸಿಗೆ ತೋರಿ ಸುತ್ತ—ಇದೇ ಸೋನಾಪುರಗಲ್ಲಿಯಲ್ಲಿರುವ ಆ ರಾಮಜಿಯ ಮನೆಯು, ಎಂದು ನುಡಿಯುತ್ತ ಬಾಗಿಲ ಬಳಿಯಲ್ಲಿ ಹೋಗಿ ನಿಂತುಕೊಂಡನು. ಬಳಿಕ ಬಾಬೂರಾಯನು ಮತ್ತೆ—ರಾಮಜಿ ಠಾಕೂರನೆಂದರೆ ಪಕ್ಕಾ ಮಾರವಾಡಿ; ಅವನದೇ ಆ ಅಂಗಡಿ. ಈ ದ್ವಾರವು ಆ ಅಂಗಡಿಯ ಹಿಂಭಾಗದಲ್ಲಿರುವದು. ಇಲ್ಲಿ ನೀನು ನಿಂತುಕೋ ; ನಾನು ಸಿಳ್ಳುಹಾಕುವವರೆಗೆ ನೀನು ಈ ಬಾಗಿಲ ಬಿಟ್ಟು ಎಲ್ಲಿಯೂ ಕದಲಬಾರದು. ನಾನು ಆಚೇ ಕಡೆಯಲ್ಲಿರುವ ಮುಂದುಗಡೆಯ ಬಾಗಿಲ ಬಳಿಯಲ್ಲಿರುವೆನು. ಇಲ್ಲಿ ಯಾರಾದರೂ ಬಾಗಿಲ ತೆರೆದು ಬಂದರೆ ಅವರನ್ನು ಗಟ್ಟಿಯಾಗಿ ಹಿಡಿದು ಸಿಳ್ಳು ಹಾಕು; ಅಂದರೆ ನಾನು ಓಡಿ ಬರುವೆನು; ಎಂದು ಕಟ್ಟಪ್ಪಣೆ ಮಾಡಿ, ತಾನು ಹೊರಟು ಹೋದನು.

ಇತ್ತ ಭೋಟೂಸಿಂಗನು ಸುಮ್ಮನೆ ನಿಂತುಕೊಂಡು ಪಹರೆ ಮಾಡ ತೊಡಗಿದನು. ಅವನು ಒಮ್ಮೆ ಆ ಮಂದಿರದ ಬಾಗಿಲ ಕಡೆಗೆ ನೋಡಿದರೆ, ಮತ್ತೊಮ್ಮೆ ಮಿಣಿಮಿಣಿ ಉರಿಯುವ ಆ ದೀಪದ ಕಡೆಗೆ ನೋಡುವನು. ಹೀಗೆಯೇ ಒಂದು ಗಳಿಗೆ ನಿಂತನು ! ಎರಡು ಗಳಿಗೆ ನಿಂತನು !! ಆದರೂ ಯಾವ ತರದ ಸಪ್ಪಳವೂ ಕೇಳದಾಯಿತು. ದೂರದಲ್ಲಿ ಹೋಗಿ ಬರುವ ಮೋಟರಗಳ ಸಪ್ಪಳ ಮಾತ್ರ ಒಮ್ಮೊಮ್ಮೆ ಕೇಳಿಸುತ್ತಿತ್ತು. ಚಳಿಯಂತೂ ತನ್ನ ಅಮಲನ್ನು ಒಂದೇಸವನೆ ನಡೆಸಿತ್ತು. ಅವನು ಥರಥರನೆ ನಡುಗುತ್ತ ಎರಡೂ ಕೈಗಳನ್ನು ಕಿಸೆಯಲ್ಲಿಟ್ಟುಕೊಂಡು ನಿಂತಿದ್ದನು. ಏನಾದರೂ ಸ್ವಲ್ಪ ಸಪ್ಪಳವಾದರೆ ಸಾಕು; ಸರಕ್ಕನೆ ಬಾಗಿಲವರೆಗೆ ಹೋಗಿ ನೋಡುವನು. ಒಮ್ಮೆ ಯಂತೂ ಒಂದು ಕರಿಯ ಟೊಣಪ ಬಾವುಗವು (ಬೆಕ್ಕು) ಮೇಲಿನಿಂದ ಜಿಗಿದು ಭೋಟೂನನ್ನು ಅಂಜಿಸಿಬಿಟ್ಟಿತು ! ಮುಂದೆ ತುಸು ಪೊತ್ತಿನ ಮೇಲೆ ಆ ಮಂದಿರದ ಒಳಭಾಗದಲ್ಲಿ ಯಾರೋ ಮಾತಾಡಿದ ದನಿ ಕೇಳತೊಡಗಿತು. ಬಳಿಕ ಪೋಲೀಸರ ಸಿಳ್ಳುಗಳು ಆಗಾಗ್ಗೆ ಆಗತೊಡಗಿದವು; ಆದರೂ ಭೋಟೂನು ಮಾತ್ರ ಆ ಸ್ಥಳವನ್ನು ಬಿಟ್ಟು ಕದಲುವಂತಿರಲಿಲ್ಲ. ಅವನು

ಒಂದೇಸವನೆ ಬಾಬೂರಾಯರು ಸಿಳ್ಳುಹಾಕುವ ಅಥವಾ ಅವರೇ ಬರುವ ದಾರಿಯನ್ನು ನೋಡುತ್ತಿದ್ದನು. ಎಷ್ಟು ಹೊತ್ತಾದರೂ ಅವರಿಂದ ಯಾವ ಸುದ್ದಿಯೂ ತಿಳಿಯದ್ದರಿಂದ, ಆತ ಬೇಸತ್ತನು.

ಹೀಗಿರಲು, ಒಳಗಿನಿಂದ ಯಾರೋ ಧಡಕ್ಕನೆ ಬಾಗಿಲ ತೆರೆದು ಹೊರಗೆ ಬಂದರು. ಭೋಟೂನಂತೂ ಜಾಗರೂಕನಾಗಿಯೇ ನಿಂತಿದ್ದನಲ್ಲವೇ? ಹೋದವನೇ ಆ ಹೊಸ ವ್ಯಕ್ತಿಗೆ ತೆಕ್ಕಿ ಬಿದ್ದನು ಅವನೇನೂ ಕಡಿಮೆಯವ ನಿದ್ದಿಲ್ಲ. ಗುದ್ದಾಡ್ಯಡುತ್ತ ಇವನನ್ನೇ ನೆಲಕ್ಕೆ ಕೆಡಹಿ, ಎದೆಯ ಮೇಲೆ ಕುಳಿತನು. ಹೀಗೆ ಎದೆಯ ಮೇಲೆ ಕುಳಿತಿದ್ದರೂ ಭೋಟೂನು ಅವನನ್ನು ಬಿಟ್ಟಿದ್ದಿಲ್ಲ. ಬಾಬೂರಾಯರು ಬರುವವರೆಗೆ ಹೇಗಾದರೂ ಮಾಡಿ ಇವನೊಡನೆ ಪೇಚಾಡಬೇಕೆಂದು ಮಾಡಿದನು. ಸೀಟಿಯನ್ನೂದಬೇಕೆಂದರೆ, ಕೈಗಳೆಲ್ಲಿ ತೆರವಿರುವವು? ಹೀಗಿರುವಾಗ ಆ ಮಂದಪ್ರಕಾಶದಲ್ಲಿ ಎದೆಯ ಮೇಲೆ ಕುಳಿತ ಮನುಷ್ಯನ ಮುಖವೂ ಆತನ ಶರೀರದ ಬೇರೆ ಭಾಗಗಳೂ ಭೋಟೂನಿಗೆ ಅಸ್ಪಷ್ಟವಾಗಿ ಕಾಣುತ್ತಿದ್ದವು. ಅಷ್ಟರಿಂದಲೇ ಅವನು ಪೋಲೀಸ ಖಾತೆಯ ಜವಾನನಿರುವನೆಂದು ಸಹಜವಾಗಿ ತಿಳಿಯುವಂತಿತ್ತು; ಹಾಗು ಅವನು ಕಳ್ಳನೇ ಆಗಿದ್ದರೆ, ತನ್ನನ್ನು ಕೆಡಹಿ ಎದೆಯ ಮೇಲೆ ಕುಳಿತ ಆ ಟೊಣಪನು ಆಗಲೆ ಓಡಿ ಹೋಗಬಹುದಾಗಿತ್ತು. ಅಂದ ಬಳಿಕ ಇವನೂ ನನ್ನಂತೆ ಶುದ್ಧ ಗಾರ್ದಭನೇ ಇರುವನು! ಎಂದು ಯೋಚಿಸುತ್ತ ಬಿದ್ದಿರಲು, ಆ ಜವಾನನು—ಕಳ್ಳನು ಸಿಕ್ಕಿರುವನು! ಕಳ್ಳನು ಸಿಕ್ಕಿರುವನು! ಬೇಗ ಬನ್ನಿರಿ, ಎಂದು ಒಂದೇಸವನೇ ಚೀರಾಡಲು, ಅದನ್ನು ಕೇಳಿ, ಜಮಾದಾರ ಸಾಹೇಬರು ತಮ್ಮ ದೊಡ್ಡ ಹೊಟ್ಟೆಯೊಡನೆ ಅಲ್ಲಿಗೆ ಬಂದು ನೋಡುತ್ತಾರೆ, ಭೋಟೂಸಿಂಗನು ಕೆಳಗೆ ಬಿದ್ದಿದ್ದಾನೆ!

ಜಮಾದಾರನು ಬಂದು ನೋಡುವಷ್ಟರಲ್ಲಿಯೇ ಕೆಳಗೆ ಬಿದ್ದುಕೊಂಡಿದ್ದ ಭೋಟೂವು— ನಾನು ಗುಪ್ತಪೋಲೀಸ ಜವಾನನಿದ್ದು ನನ್ನನ್ನು ಸುಮ್ಮನೆ ನೆಲಕ್ಕೆ ಕೆಡಹಿ ಗುದ್ದತೊಡಗಿದ್ದಾನೆ. ಮೇಲೆ ಕುಳಿತ ಈ ರಕ್ಕಸನನ್ನು ಬೇಗನೆ ಎಬ್ಬಿಸಿರಿ! ನಾನು ಉಸಿರುಕಟ್ಟಿ ಸಾಯುತ್ತೇನೆ. ಎಂದು ಕೆಟ್ಟ ದನಿಯಿಂದ ಒದರಿದನು. ಆಗ ಜಮಾದಾರನು ಹತ್ತರ ಬಂದು ನೋಡಲು ಆತನಿಗೆ ಅಲ್ಪಸ್ವಲ್ಪ ಗುರುತು ಹತ್ತಿದ ಹಾಗಾಯಿತು. ಅವನು

ರಾಯರ ಆಫೀಸ ರೂಮಿನಲ್ಲಿ ದೀಪವು ಢಾಳಾಗಿ ಉರಿಯುತ್ತಿತ್ತು. ಅದನ್ನು ಕಂಡು— ಚಾಕರಬಾಯಿಗೆ ಚಿಂತೆಯೇತರದು ? ರಾವಸಾಹೇಬರು ರೂಮಿನಲ್ಲಿಲ್ಲದಾಗ ಇಷ್ಟು ಪ್ರಕಾಶಮಾನವಾಗಿ ದೀಪವನ್ನು ಉರಿಸಬಹುದೇ? ಎಂದು ಯೋಚಿಸುತ್ತ ಮೇಲಕ್ಕೇರಿ ಹೋಗಿ ನೋಡುತ್ತಾನೆ, ಕೋಣೆಯಲ್ಲಿ ಬಾಬೂರಾಯರು ಸಿಗರೇಟು ಸೇದುತ್ತ ಕುಳಿತುಕೊಂಡಿದ್ದಾರೆ! ಅವರ ಎದುರಿನಲ್ಲಿ ಪೋಪಟಲಾಲನು ಕುಳಿತುಕೊಂಡು ಚಕ್ಕಂದದಿಂದ ಹರಟೆ ಕೊಚ್ಚುತ್ತಿದ್ದಾನೆ ! ಅವರು ಹೀಗೆ ಕುಳಿತು ಬಹಳ ಹೊತ್ತಾಗಿರಬಹುದೆಂಬದನ್ನು ಸಹ ತಿಳುಕೊಂಡನು. ಆಗ ಅವನಿಗೆ ಏನೂ ತಿಳಿಯದ ಹಾಗಾಯಿತು. ಇವರು ಇಲ್ಲಿಗೆ ಹೇಗೆ ಬಂದರು ? ಎಂದು ಯೋಚಿಸಿ ಭೋಟೂನು ಒಳಗೆ ಹೋಗಿ ಒತ್ತಟ್ಟಿಗೆ ಉಶ್ ಎಂದು ಕುಳಿತನು.

## ಬಾಬೂರಾಯನು ಹತಾಶನಾದನು.

ಬಹಳ ಹೊತ್ತಾದರೂ ಭೋಟೂನನ್ನು ಯಾರೂ ಮಾತಾಡಿಸಲಿಲ್ಲ, ಆದರಿಂದ ಅವನಿಗೆ ಬಹಳ ಕೆಡಕೆನಿಸಿತು. ಯಾಕಂದರೆ, ಬಾಬೂರಾಯರು ತನ್ನನ್ನು ಬಿಟ್ಟು ಬಂದಿರುವದೊಂದು ಭೋಟೂನಿಗೆ ಮೊದಲೇ ಅಸಮಾಧಾನವೆನಿಸಿತ್ತು; ಅದರ ಮೇಲೆ ಮನೆಗೆ ಬಂದ ಬಳಿಕ ತನ್ನನ್ನು ಬೇಗ ಮಾತಾಡಿಸಲಿಲ್ಲ ಸಹ ! ಹೀಗಾಗಿ ಅವನು ಸಿಟ್ಟಿನಿಂದ ಕೂಡಿದ ಉದಾಸೀನತೆಯುಳ್ಳವನಾಗಿ ಕುಳಿತುಕೊಂಡಿದ್ದನು. ಮುಂದೆ ಕೆಲ ಹೊತ್ತಾದ ಬಳಿಕ ಬಾಬೂರಾಯನು ಭೋಟೂನನ್ನು ಕುರಿತು— ಭೋಟೂ, ನಿನಗೆ ಬರಲಿಕ್ಕೆ ಇಷ್ಟು ತಡವೇಕೆ ? ಎಂದು ಕೇಳಿದನು.

ಭೋ :— ನೀವು ನನ್ನೊಬ್ಬನನ್ನೇ ಅಲ್ಲಿ ಬಿಟ್ಟು ಬಂದು, ಮತ್ತೆ ಈ ಪ್ರಶ್ನೆಯೇ ? ಚೆನ್ನಾಗಿದೆ ! ನಾನು ನಿಮ್ಮ ದಾರೀ ನೋಡಿ ನೋಡಿ ಬೇಸತ್ತು, ಚಳಿಯಲ್ಲಿ ನಡುಗಲಾರದೆ, ಈಗ ಇಲ್ಲಿಗೆ ಹೊರಟು ಬಂದೆನು. ಅಲ್ಲಿ ನಾನು ಅನುಭವಿಸಿದ ಗೋಳನ್ನು ನೀವೇನು ಬಲ್ಲಿರಿ ?

ಬಾಬೂ :— ನೀನು ಏನೆನ್ನುವೆ ? ನಿನ್ನ ಮಾತಿನ ಅರ್ಥವೇ ನನಗೆ ತಿಳಿಯಲೊಲ್ಲದು !

ಭೋ :— ಸೋನಾಪುರಗಲ್ಲಿಯಲ್ಲಿ ರಾಮಜಿಯ ಮನೆಯ ಹಿಂದು ಗಡೆಯ ಬಾಗಿಲಲ್ಲಿ ನನ್ನನ್ನು ನಿಲ್ಲಿಸಿ, ನಾನು ಬರುವ ವರೆಗೆ ನೀನು ಈ ಸ್ಥಾನ ಬಿಟ್ಟು ಕದಲಬಾರದೆಂದು ಕಟ್ಟಪ್ಪಣೆ ಮಾಡಿ ಹೋದ ತಾವು ಹೀಗೆ ನನ್ನನ್ನು ಬಿಟ್ಟೇ ಬಂದರೆ, ಅಲ್ಲಿ ನಾನೊಬ್ಬನು ಸತ್ತುಹೋಗುವದೇ ಸರಿ !

ಬಾಬೂ:— ನಿನಗೆ ಹುಚ್ಚು ಹಿಡಿದಿರುವದೋ ಅಥವಾ ಸ್ವಪ್ನದಲ್ಲಿ ರುವೆಯೋ ? ಆಗಿರುವದಾದರೂ ಏನು ? ನಾನು ನಿನ್ನನ್ನೆಲ್ಲಿ ಕರ ಕೊಂಡು ಹೋಗಿರುವೆನು ? ಎಲ್ಲಿಯ ಸೋನಾಪುರಗಲ್ಲಿ ! ಎಲ್ಲಿಯ ರಾಮಜಿಯ ಅಂಗಡಿ ! ನೀನೆನ್ನುವದೇ ನನಗೆ ತಿಳಿಯದು ! ನಾನೊ ಬ್ಬನೇ ತಿರುಗಾಡಿ ಬಂದೆನಷ್ಟೇ; ಆದರೆ ಸೋನಾಪುರಗಲ್ಲಿಯಲ್ಲಲ್ಲ, ಬೇರೆ ಕಡೆಗೆ. ಅಂದಮೇಲೆ ನೀನನ್ನುವದು ನನಗೆ ಹೇಗೆ ತಿಳಿಯಬೇಕು ?

ಆಗ ಭೋಟೂನು ಬಹಳ ಗೊಂದಲದಲ್ಲಿ ಬಿದ್ದನು. ಬಾಬೂ ರಾಯರು ಚೇಷ್ಟೆ ಮಾಡುತ್ತಿರಬಹುದೆಂದು ಅವನು ಮೊದಲು ತಿಳಿದಿ ದ್ದನು; ಆದರೆ ಅವರು ಸರಳ ರೀತಿಯಿಂದ ಮಾತಾಡುತ್ತಾರೆಂಬದು ಅವರ ಧ್ವನಿಯ ಮೇಲಿಂದ ಅವನಿಗೆ ತಿಳಿದು ಬರಲು, ಇದರ ಇಂಗಿತವೇನಿರ ಬಹುದೆಂದು ಅವನು ಮನದಲ್ಲಿ ಆಲೋಚಿಸಿ, ತನ್ನನ್ನು ನಡುದಾರಿಯಲ್ಲಿ ಮೋಟರಿನಿಂದ ಕರೆದುಕೊಂಡು ಹೋದ ಸಂಗತಿ ಮೊದಲ್ಗೊಂಡು, ತಿರುಗಿ ಮನೆಗೆ ಬರುವ ವರೆಗಿನ ಎಲ್ಲ ಸಂಗತಿಗಳನ್ನು ಸವಿಸ್ತರವಾಗಿ ಅವರಿಗೆ ತಿಳಿಸಿದನು. ಅದರಿಂದ ಬಾಬೂರಾಯರು— ಈ ದಿನ ನಿನ್ನನ್ನು ಯಾರೋ ವಂಚಿಸಿರುವರೆಂದು ನನಗೆ ತೋರುತ್ತದೆ. ಎಂದು ನುಡಿದು ತಮ್ಮ ಮಲ ಗುವ ಕೋಣೆಗೆ ಹೋದರು. ಅಲ್ಲಿ ತಮ್ಮ ಬೂಟು, ಓವ್ಹರ ಕೋಟು, ಟೊಪ್ಪಿಗೆಗಳು ಅವ್ಯವಸ್ಥಿತ ರೀತಿಯಿಂದ ಇಡಲ್ಪಟ್ಟಿದ್ದು, ಕಾಲರು ಬೆವರಿ ನಿಂದ ತೊಯ್ದುದ್ದು ಇನ್ನೂ ಆರಿದ್ದಿಲ್ಲ! ಎಂಬದನ್ನು ಕಂಡು— ಭೋಟೂ, ಇಂದು ಯಾರೋ ನನ್ನ ಡ್ರೆಸ್ಸು ಧರಿಸಿ, ನಿನ್ನನ್ನು ಮೋಸಗೊಳಿಸಿರುವದ ರಲ್ಲೇನೂ ಸಂಶಯವಿಲ್ಲ; ಅಂದಮೇಲೆ ನಿನ್ನನ್ನು ಈ ದಿನ ಇಷ್ಟು ಪೇಚಿಗೆ

ಹಾಕಿದವರಾರು ?

ಬಾಬೂರಾಯರ ಮಾತಿನಿಂದ ಘೋಟೂನು ಮನದಲ್ಲಿ ನಾನೇನು ಕುರುಡನಾದೆನೋ ? ಸಹಜವಾಗಿ ತನ್ನನ್ನು ಹೀಗೆ ವಂಚಿಸಿದವನು ಬೇರೆ ಯಾರೂ ಆಗಿರದೆ ಬಹಾದ್ದರನೇ ಎಂಬದು ಅವನಿಗೆ ಹೊಳೆಯಲು, ಅವನು— ತಮ್ಮ ಪೂರ್ಣ ಪರಿಚಯದ ಆ ಬದಮಾಷ್ ಬಹಾದ್ದರನೇ ಈ ದಿನ ನನ್ನನ್ನು ಠಕ್ಕಿಸಿರುವದು ನಿಜವು ! ಹೀಗಾದರೆ ಮುಂದೆ ಗತಿ ಯೇನು ? ಎಂದು ಬಹು ಖಿನ್ನತೆಯಿಂದ ನುಡಿದನು.

ಘೋಟೂನ ಸ್ಥಿತಿಯನ್ನು ಕಂಡು ಬಾಬೂರಾಯರಿಗೆ ಒಮ್ಮೆ ದಯೆಯೂ ಒಮ್ಮೆ ನಗೆಯೂ ಉಂಟಾಗುತ್ತಿದ್ದವಲ್ಲದೆ, ಬಹಾದ್ದರನ ಬಗ್ಗೆ ಸ್ವಲ್ಪ ಸಿಟ್ಟೂ ಬಂತು; ಆದರೆ ಈ ದಿವಸ ಘೋಟೂನನ್ನು ನೆಲಕ್ಕೆ ಕೆಡಹಿ ಎದೆಯ ಮೇಲೆ ಕುಳಿತು ಗುದ್ದಿ ಹಣ್ಣು ಮಾಡಿದ ಸಂಗತಿಯನ್ನು ಕೇಳಿ ಪೋಪಟಲಾಲನು ಮಾತ್ರ ಅವನಿಗೆ ಚೇಷ್ಟೆ ಮಾಡಿ ನಕ್ಕನು. ಘೋಟೂ, ನಿನಗೆ ಸುಳ್ಳೇ ಪತ್ರವನ್ನು ತೋರಿಸಿ, ಆ ನಿರ್ಜನ ಗಲ್ಲಿಯಲ್ಲಿ ನಿಲ್ಲ ಹೇಳಿ, ಆತನು ಸಂಕೇತದಂತೆ ಕಳವು ಮಾಡಿಕೊಂಡು ಹೋಗಿರುವನು. ಇಂಥ ಅದ್ಭುತ ಧೈರ್ಯಶಾಲಿಯೂ ಯುಕ್ತಿವಂತನೂ ಆದ ಆ ಕಳ್ಳನು ಬಹಾದ್ದರನ ಹೊರತು ಯಾರಿರುವರು ? ಅವನು ನನ್ನನ್ನೇ ಮೋಸಗೊಳಿಸುತ್ತಿರುವಾಗ, ನಿನ್ನಂಥವನ ಪಾಡೇನು ? ಇದಕ್ಕಾಗಿ ನೀನೇಕೆ ಇಷ್ಟು ಖಿನ್ನನಾಗಿರುವೆ ? ನಾನಾದರೂ ಇದೇ ಈಗ ಅವನಿಂದ ವಂಚಿಸಲ್ಪಟ್ಟು ಹತಾಶನಾಗಿ ಕುಳಿತಿರುವೆನು. ಅವನು ಭವಾನರಾಯರ ಹೆಸರಿನಿಂದ ನನಗೆ ಬಹಾದ್ದರನನ್ನು ಹಿಡಿದಿರುವೆನು; ನೀವು ಕೂಡಲೇ ಹೊರಟು ಬರಬೇಕು. ಎಂಬದಾಗಿ ಫೋನು ಕೊಟ್ಟಿದ್ದನು. ಅದನ್ನು ಕೇಳಿದಾಕ್ಷಣವೇ ಇದರಲ್ಲಿ ಏನೋ ಮೋಸವಿದೆಯೆಂದು ತಿಳಿದರೂ, ಭವಾನರಾಯರ ಕಡೆಗೆ ಹೋಗದೆ ಇರಲಿಕ್ಕಾಗಲಿಲ್ಲ. ಶ್ರಮಬಟ್ಟು ಅಷ್ಟು ದೂರ ಹೋಗಿ ವಿಚಾರಿಸಲು, ಎಲ್ಲವೂ ಮೋಸವೆ ? ನಾನು ಬೇಸತ್ತು ಈಗ ಮನೆಗೆ ಬಂದೆನು. ಅಷ್ಟರಲ್ಲಿ ಈ ಪೋಪಟಲಾಲರವರು ಬರಲು, ಇವರೊಡನೆ ಮಾತಾಡುತ್ತ ಕುಳಿತಿರುವೆನು, ಎಂದು ಬಾಬೂರಾಯನು ನುಡಿದನು.

ಘೋಟೂನಿಗೆ ಮಾತ್ರ ಬಹಾದ್ದರನ ವಿಷಯದ ಹಳಹಳಿಯು ತಪ್ಪ

ಲೊಲ್ಲದು! ಅವನು ಕುಳಿತಲ್ಲಿಯೇ ಯೋಚಿಸತೊಡಗಿದನು. ಎಂಥ ಬಹಾದ್ದರನವನು! ಮನೆಮುಟ್ಟ ಬಂದು ನನ್ನನ್ನು ಕರಕೊಂಡು ಹೋಗಿ ತಾನೇ ನನ್ನನ್ನು ಕಳವು ಮಾಡತಕ್ಕ ಅಂಗಡಿಯ ಬಾಗಿಲ ಕಾಯಲಿಕ್ಕೆ ಹಚ್ಚಿ, ತಾನು ನಿರ್ಭೀತಿಯಿಂದ ಒಳಗೆ ಪ್ರವೇಶಿಸಿ, ಸಾವಕಾಶವಾಗಿ ತನ್ನ ಕೆಲಸ ತೀರಿಸಿಕೊಂಡು, ಬೇರೆ ಮಾರ್ಗದಿಂದ ನಿರ್ವಿಘ್ನವಾಗಿ ಹೊರಟು ಹೋಗಿರುವನು. ಅವನ ಜೊತೆಯಲ್ಲಿ ಕುಳಿತು ಅಡ್ಡಾಡಿ, ಅವನನ್ನು ಗುರುತಿಸದೆ ಹೋದೆನಲ್ಲ! ಧ್ವನಿಯು ಸ್ವಲ್ಪ ಬದಲಾದಂತೆ ಕಂಡರೂ, ಚಳಿಯಿಂದ ಹೀಗಾಗಿರಬಹುದೆಂದು ತರ್ಕಿಸಿದೆನು. ಅಂತೂ ಈ ದಿನ ಅವನು ನನ್ನನ್ನು ಚನ್ನಾಗಿ ಮೋಸಗೊಳಿಸಿದನು, ಎಂಬುದೇ ಮೊದಲಾಗಿ ಯೋಚಿಸಿ ಯೋಚಿಸಿ ಬೇಸತ್ತು, ಕಡೆಗೆ ಬಾಬೂರಾಯರನ್ನು ಕುರಿತು—

ಭೋ:— ನಾಳೆ ನಿಮ್ಮನ್ನು ಕಳವಾದ ವಿಷಯದ ಬಗ್ಗೆ ಜವಾಬು ಕೇಳುವರು; ಯಾಕಂದರೆ ನಾನು ನಿಮ್ಮ ಹೆಸರನ್ನು ಜಮಾದಾರ ಸಾಹೇಬರಿಗೆ ತಿಳಿಸಿರುವೆನು. ಆಗ ನೀವು ಏನೆಂದು ಹೇಳುವಿರಿ?

ಬಾಬೂ:— ನಾನು ನಿಜ ಸಂಗತಿಯನ್ನು ತಿಳಿಸಿ, ಆಗ ನಾನು ಬೇರೆ ಕಡೆಗಿದ್ದೆನೆಂಬದನ್ನು ಸಹಜವಾಗಿ ಸಿದ್ಧ ಮಾಡಿ ಕೊಡುವೆನು. ನಾನು ಬೇರೊಬ್ಬ ಕಳ್ಳನಿಂದ ವಂಚಿಸಲ್ಪಟ್ಟಿದ್ದು, ಭವಾನರಾವ ಇನಸ್ಪೆಕ್ಟರ ಕಡೆಗೆ ಹೋಗಿದ್ದೆನೆಂದು ಹೇಳಿಬಿಡುವೆನು. ಆದರಿಂಬ ನನ್ನ ಅಪಮಾನವಾಗುವದು ನಿಜವು! ಆಗಲಿ. ಅವನನ್ನು ಹಿಡಿಯುವ ವರೆಗೂ ಈ ಯೋಚನೆ ತಪ್ಪಿದ್ದೇ ಅಲ್ಲ.

ಇವರಿಬ್ಬರಲ್ಲಿ ನಡೆದ ಸಂಭಾಷಣವನ್ನು ಕೇಳುತ್ತ ಆದುವರೆಗೆ ಸುಮ್ಮನೆ ಕುಳಿತಿದ್ದ ಪೋಪಟಲಾಲನು ಚಟ್ಟನೆ ಎದ್ದು ನಿಂತು, ಮೈಯನ್ನು ಒಡ್ಡುಮುರಿದು ಆಕಳಿಕೆಗಳು ಮೇಲಿಂದ ಮೇಲೆ ಬರುತ್ತಿರಲು, ಇದುವರೆಗೆ ನಿಮ್ಮ ಸಂಭಾಷಣವನ್ನು ಕೇಳುತ್ತಿದ್ದ ನನ್ನ ವೇಳೆಯು ವಿನೋದದಲ್ಲಿ ಹೋಯಿತು. ಬಾಬೂರಾವ, ನೀವಂತೂ ಶಕ್ತಿಮೀರಿ ಸಾಹಸ ಮಾಡುತ್ತಿರುವಿರಿ! ಇನ್ನಾದರೂ ನನ್ನ ಪ್ರೀತಿಯ ಆಭರಣಗಳು ಸಿಗಬಹುದೆಂದು ನಾನು ನಿಮ್ಮ ಭರವಸೆಯಿಂದ ನಿಶ್ಚಿಂತನಾಗಿ ಕುಳಿತಿರುವೆನು. ದೇವರು

ನಿಮ್ಮ ಪ್ರಯತ್ನಕ್ಕೆ ತೀವ್ರವಾಗಿ ಯಶ ಕೊಡಲಿ! ಎಂದು ನುಡಿದವನೇ ಬಾಗಿಲ ಕಡೆಗೆ ನಡೆದನು; ಆದರೆ ಮುಂದೆ ಹೋಗುವಷ್ಟರಲ್ಲಿ ಒಳಬಾಗಿಲ ಹತ್ತರ ಏನೋ ಕಾಲಿಗೆ ತಾಕಿದ್ದರಿಂದ ಅವನು ಕೆಳಗೆ ಬಾಗಿ ಏನನ್ನೋ ಕೈಯಲ್ಲಿ ತಕ್ಕೊಂಡನು. ಆಗ ಭೋಟೋನು ಚಟಕ್ಕನೇ ಎದ್ದು ಹೋಗಿ ನೋಡುತ್ತಾನೆ, ಬಾಯಿ ಬಂದು ಮಾಡಿದ ಒಂದು ಪತ್ರ! ಅದರ ಮೇಲೆ ಬಾಬೂರಾಯನ ಹೆಸರು ಇರುವದರಿಂದ, ಅವನು ಮತ್ತಿಷ್ಟು ಸೋಜಿಗ ಗೊಂಡು, ದೀಪದ ಹತ್ತರ ಬಂದು, ಬಾಬೂರಾಯನ ಅಪ್ಪಣೆಯ ಪ್ರಕಾರ ಅದನ್ನು ಒಡೆದು ಓದತೊಡಗಿದನು—

ಪ್ರಿಯ ಬಾಬೂರಾವ, ಈ ದಿನ ನಿಮಗೆ ಬಹಳ ಶ್ರಮವಾಗಿರಬಹುದು. ಆದರೆ ಏನು ಮಾಡಲಿ? ನನ್ನ ಕಾರ್ಯಸಾಧನೆಗಾಗಿ ಹೀಗೆ ಮತ್ತೆ ಮತ್ತೆ ನಿಮಗೆ ತೊಂದರೆ ಕೊಡಲೇಬೇಕಾಗಿರುವದು. ವಿನೋದಕ್ಕಾಗಿ ಭೋಟೋ ನನ್ನು ಪರೀಕ್ಷಿಸಲು, ಅವನು ಸಹಜವಾಗಿ ಕೈವಶವಾದನು. ಇಷು ಸುಲಭ ರೀತಿಯಿಂದ ಆತನು ಹಾದಿಗೆ ಬರಲಿಕ್ಕಿಲ್ಲವೆಂದು ತಿಳಿದಿದ್ದೆನು. ಆಗಲಿ, ಆದದ್ದಾಯಿತು. ಇನ್ನು ಮಿಂಚಿ ಹೋದ ಮಾತಿಗೆ ಚಿಂತಿಸಿದರೆ ಆಗುವದೇನು? ರಾಮಜಿ ಠಾಕುರಜಿಯ ಅಂಗಡಿಯೊಳಗಿನ ಶಿರೋ ಭೂಷಣವು ನಿನ್ನೆ ರಾತ್ರಿ ನಿರ್ವಿಘ್ನವಾಗಿ ನನ್ನ ಕೈಸೇರಿತು; ಆದರೆ ಆ ಆಭರಣವೇನೂ ಅಂಥ ಬೆಲೆ ಬಾಳುವದಲ್ಲ! ಸುಮ್ಮನೆ ಶ್ರಮಬಟ್ಟಿಹಾಗಾ ಯಿತು. ಆಗಲಿ, ನಿಮಗೆ ಇನ್ನು ಮುಂದೆ ನನ್ನನ್ನು ಹಿಡಿಯುವ ಹುರುಪು ಉಳಿದಿರಲಿಕ್ಕಿಲ್ಲ. ನೀವು ನಿಜವಾಗಿಯೂ ನನ್ನ ಸಲುವಾಗಿ ಹತಾಶರಾಗಿ ದ್ದರೆ ಎಲ್ಲ ಡಿಟೆಕ್ಟಿವ್ಹರೂ ಕೂಡಿ ಕಳ್ಳನಿಗೆ ಶರಣು, ಎಂದು ಪ್ರಸಿದ್ಧ ಪಡಿ ಸಿರಿ. ಅಂದರೆ ನಾನು ಮುಂದೆ ಮಾಡತಕ್ಕದ್ದನ್ನು ಮಾಡುತ್ತೇನೆ. ನಿಮ್ಮ ಬುದ್ಧಿ ಚಾತುರ್ಯಗಳ ಮಟ್ಟು ತಿಳಿದಂತಾಯಿತು.

ನಿಮ್ಮ
ಬಹಾದ್ದರ.

ಈ ಪತ್ರದ ಸಂಗತಿಯನ್ನು ಶ್ರವಣ ಮಾಡಿ, ಪೋಪಟಲಾಲನು ಬಿದ್ದು ಬಿದ್ದು ನಕ್ಕನು. ಡಿಟೆಕ್ಟಿವ್ಹ ಇನಸ್ಪೆಕ್ಟರ ಬಾಬೂರಾಯನಂತೂ ಹತಾಶನಾಗಿ ಮೋರೆ ಒಣಗಿಸಿಕೊಂಡು ಸುಮ್ಮನೆ ಕುಳಿತನು. ಆಗ ಆತನ

ಮುಖದಿಂದ ಈ ಬಹಾದ್ದರ ಕಳ್ಳನ ಮುಂದೆ ನಾವು ನಿಜವಾಗಿಯೂ ಸೋತೆವು. ನಮ್ಮ ಗರ್ವವು ಭಂಗವಾಯಿತು! ಎಂಬ ಉದ್ಗಾರಗಳು ಹೊರಟವು. ಪೋಪಟಲಾಲನು ನಗುತ್ತ ಅಲ್ಲಿಂದ ಹೊರಟು ಹೋದನು.

## ಕಳ್ಳನಿಗೆ ಕಾಣಿಕೆ !

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಇನಸ್ಪೆಕ್ಟರ ಬಾಬೂರಾಯನು ಹತಾಶನಾಗಿ, ಬಹಾದ್ದೂರನಿಂದ ವಂಚಿಸಲ್ಪಟ್ಟ ಎಲ್ಲ ಡಿಟೆಕ್ಟಿವ್ಹ ಇನಸ್ಪೆಕರರನ್ನು ಕರೆಯಿಸಿದನು. ಸರದಾರಸಿಂಗ, ಭವಾನರಾವ ಮೊದಲಾದವರು ಬಂದರು. ಆಗ ಬಾಬೂರಾಯನು ಅವರಿಗೆ ಬಹಾದ್ದರನ ಪತ್ರವನು ತೋರಿಸಿ, ಮುಂದೆ ಏನು ಮಾಡಬೇಕೆಂದು ಪ್ರಶ್ನೆ ಮಾಡಿದನು. ಚತುರನಾದ ಬಾಬೂರಾಯನೇ ಹತಾಶನಾಗಿರುವಾಗ ಉಳಿದವರ ಪಾಡೇನು? ಅವರೂ ಕೈ ಊರಿದರು; ಆದರೆ ನಾವು ಸೋತೆವೆಂದು ವರ್ತಮಾನಪತ್ರದಲ್ಲಿ ಪ್ರಸಿದ್ಧ ಮಾಡುವದು ನಮಗೆ ತುಂಬಾ ಅಪಮಾನಕರವು. ಆದ್ದರಿಂದ ಇಂಥ ಕೆಲಸವನ್ನೇನೂ ಮಾಡದೆ, ಕೆಲವು ದಿನಗಳ ವರೆಗೆ ಬಹಾದ್ದರನನ್ನು ಹಿಡಿಯುವ ಹವ್ಯಾಸವನ್ನೇ ಬಿಟ್ಟುಬಿಡಬೇಕು; ಎಂದು ಅವರು ನುಡಿದರು. ಅವರ ಮಾತು ಬಾಬೂರಾಯನ ಮನಸ್ಸಿಗೂ ಬಂದದ್ದರಿಂದ ಅವನೂ ಅದಕ್ಕೆ ಒಪ್ಪಿಕೊಂಡನು.

ಮರುದಿನ ಅವರು ಹಾಸಿಗೆಯಿಂದೇಳುವಷ್ಟರಲ್ಲಿ ಬೀದಿಯಲ್ಲಿ ವರ್ತಮಾನಪತ್ರಗಳನ್ನು ಮಾರುವವನು, — ಡಿಟೆಕ್ಟಿವ್ಹ ಇನಸ್ಪೆಕ್ಟರರಾದ ಬಾಬೂರಾಯರು ಹತಾಶರಾದರು ! ಎಂದು ಕೂಗುತ್ತ ನಡೆದಿದ್ದನು. ಬಾಬೂರಾಯನು ಒಂದು ಪ್ರತಿಯನ್ನು ತರಿಸಿ ಓದಿ ನೋಡಿ, ಕಳ್ಳನು ಸೇರಿಗೆ ಸವ್ವಾಸೇರಾಗಿರುವನು, ಎಂದು ನುಡಿದು, ಉಸುರ್ಗರೆದನು ಮಾತ್ರ ! ಬೇರೆ ಮಾತುಗಳು ಅವನ ಬಾಯಿಂದ ಹೊರಡಲೇ ಇಲ್ಲ. ಇದರಂತೆ ಭವಾನರಾವ, ಸರದಾರಸಿಂಗ ಮೊದಲಾದವರೂ ಆ ಪತ್ರವನ್ನು ನೋಡಿ

ತಲೆ ತಗ್ಗಿಸಿದರು. ಈ ಸಂಗತಿಗೆ ಮೂರು ನಾಲ್ಕು ದಿನಗಳು ಕಳೆದವು. ಬಾಬೂರಾಯನು ತನ್ನ ಉಪ್ಪರಿಗೆಯ ಮೇಲೆ ಯಾವುದೋ ಒಂದು ಖೂನೀ ಪ್ರಕರಣವನ್ನು ಕೈಯಲ್ಲಿ ತಕ್ಕೊಂಡು ಕುಳಿತಿರಲು, ಬೀದಿಯಲ್ಲಿ ವರ್ತಮಾನಪತ್ರ ಮಾರುವವನು, ಕಳ್ಳನು ತಾನಾಗಿಯೇ ಬೈಲಿಗೆ ಬರುವನು; ಎಂದು ಕೂಗುತ್ತ ನಡೆದಿದ್ದನು. ಬಾಬೂರಾಯನು ಉತ್ಸುಕನಾಗಿ, ಆ ಪತ್ರವನ್ನು ತರಿಸಿ ಓದಿದನು. ಅದರಲ್ಲಿ ಹೀಗೆ ಬರದಿತ್ತು:--

ನಾನು ಬಹಾದ್ದರನೆಂಬ ಪ್ರಸಿದ್ಧ ಕಳ್ಳನು; ಆದರೆ ಸ್ವಾರ್ಥಕ್ಕಾಗಿ ನಾನು ಕಳವು ಮಾಡತಕ್ಕವನಲ್ಲ. ಖುದಾಬಾದ ಸಂಸ್ಥಾನದಲ್ಲಿರತಕ್ಕ ಡಿಟೆಕ್ಟಿವ್ಹರ ಬುದ್ಧಿ–ಸಾಮರ್ಥ್ಯವನ್ನು ಪರೀಕ್ಷಿಸುವದಕ್ಕೋಸ್ಕರ ಬುದ್ಧಿಪೂರ್ವಕವಾಗಿ ಕಳ್ಳತನದ ಹೋರೆಯನ್ನು ಕೈಕೊಂಡೆನು. ಆದರೆ ನನ್ನ ಕಳ್ಳತನದ ಚಮತ್ಕೃತಿಯಮುಂದೆ ಸಂಸ್ಥಾನದ ಡಿಟೆಕ್ಟಿವ್ಹರು ಹತಾಶರಾದರು. ಮುಂಬಯಿಯ ಪ್ರಸಿದ್ಧ ಡಿಟೆಕ್ಟಿವ್ಹರಾದ ಬಾಬೂರಾಯರೂ ಕೈಊರಿದರು. ಬಾಬೂರಾಯರ ಯೋಗ್ಯತೆಯನ್ನು ಪರೀಕ್ಷಿಸುವ ಇಚ್ಛೆಯು ನನಗಿತ್ತು. ಆ ಇಚ್ಛೆಯೂ ಸಂಪೂರ್ತಿಯಾಯಿತು. ಬಾಬೂರಾಯರು ಒಳ್ಳೇ ಕುಶಲರಿರುವರು. ಆದರೆ ನನ್ನನ್ನು ಹಿಡಿಯುವದಕ್ಕೆ ಮಾತ್ರ ಅವರಿಂದಾಗಲಿಲ್ಲ. ಇನ್ನು ಮುಂದೆ ನಾನು ಹೀಗೆ ಡಿಟೆಕ್ಟಿವ್ಹರನ್ನು ಪರೀಕ್ಷಿಸುವದನ್ನು ಬಿಟ್ಟುಬಿಟ್ಟಿದ್ದೇನೆ: ಮತ್ತು ಇಂದೇ ಸಂಸ್ಥಾನಿಕರಿಗೆ ಭೆಟ್ಟಿಯಾಗಿ ನನ್ನ ನಿಃಸ್ವಾರ್ಥ ಬುದ್ಧಿಯನ್ನು, ಸದುದ್ದೇಶವನ್ನು ಅವರಿಗೆ ತಿಳಿಸಿ, ನಾನು ಇಂದಿನ ವರೆಗೆ ಕಳವು ಮಾಡಿದ ಎಲ್ಲ ಸಾಮಾನುಗಳನ್ನು ತಾರೀಖು, ತಪಸೀಲುಗಳ ಟಿಪ್ಪಣಿ ಸಹಿತ ಅವರ ವಶಕ್ಕೆ ಕೊಟ್ಟಿದ್ದೇನೆ. ಅವರು ಇದೇ ತಿಂಗಳ ೨ನೇ ತಾರೀಖಿನ ದಿವಸ ಜಾಹೀರ ಸಭೆಯನ್ನು ಕೂಡಿಸಿ ನನ್ನ ಸನ್ಮಾನ ಮಾಡಿ ಅವರವರ ಪದಾರ್ಥಗಳನ್ನು ಅವರವರಿಗೆ ಕೊಡತಕ್ಕವರಿದ್ದಾರೆ. ಆ ಕಾಲಕ್ಕೆ ಸರ್ವರೂ ಖುದಾಬಾದಿಗೆ ದಯಮಾಡಿಸಿ, ಆ ಸಭೆಗೆ ಭೂಷಣವನ್ನುಂಟುಮಾಡಬೇಕೆಂದು ಕೋರುತ್ತೇನೆ.

ತಮ್ಮ ಪ್ರಸಿದ್ಧ ಕಳ್ಳ,

ಬಹಾದ್ದರ.

ಈ ಮೇರೆಗಿರುವ ಪತ್ರವನ್ನೋದಿ ಬಾಬೂರಾಯನು ಮನದಲ್ಲಿ ನಾಚಿಕೊಂಡನು. ೨೦ ನೇ ತಾರೀಖಿಗೆ ಖುದಾಬಾದದಲ್ಲಿ ಸಭೆಯು ಸೇರಿತು. ಸಂಸ್ಥಾನಿಕರೇ ಅದರ ಅಧ್ಯಕ್ಷರಾದರು. ಬಹಾದ್ದರನಿಂದ ಕಳವು ಮಾಡಲ್ಪಟ್ಟ ಪದಾರ್ಥಗಳ ಒಡೆಯರೆಲ್ಲರೂ ಬಂದಿದ್ದರು. ಸರದಾರಸಿಂಗ, ಭವಾನರಾವ, ಬಾಬೂರಾವ ಮೊದಲಾದ ಡಿಟೆಕ್ಟಿವ್ಹರೂ ಬಂದರು. ಪ್ರೇಕ್ಷಕರ ಸಂಖ್ಯೆಗಂತೂ ಮಿತಿಯೇ ಇಲ್ಲದಾಯಿತು. ಸಭೆಯು ಹೀಗೆ ಸಂಘಟಿತವಾಗಿರಲು, ನಡುಹರೆಯದ ಒಬ್ಬ ಶ್ರೀಮಂತ ತರುಣನು ಮೇಜಿನ ಮೇಲೆ ಎದ್ದು ನಿಂತನು. ಆ ತರುಣನು ಎಲ್ಲ ಡಿಟೆಕ್ಟಿವ್ಹರಿಗೂ ಪದಾರ್ಥಗಳನ್ನು ಕಳೆದುಕೊಂಡವರಿಗೂ ಪರಿಚಿತನಾಗಿದ್ದನು. ಈತನು ಯಾಕೆ ಎದ್ದು ನಿಂತನೆಂದು ಜನರು ಯೋಚಿಸುತ್ತಿರಲು, ಆ ತರುಣನು ಸಭಿಕರನ್ನುದ್ದೇಶಿಸಿ :—

ಮಹಾಶಯರೇ, ನನ್ನನ್ನು ಕ್ಷಮಿಸಿರಿ. ನಾನು ಯಾವ ಸ್ವಾರ್ಥಕ್ಕಾಗಿಯೂ ನಿಮಗೆ ಹಿಂಸೆ ಕೊಟ್ಟಿಲ್ಲ. ದೇವರು ನನಗೆ ಕೊಟ್ಟಿರುವ ಬುದ್ಧಿ ವೈಭವವನ್ನು ಜಗತ್ತಿಗೆ ತೋರಿಸಬೇಕೆಂದೂ ಸಂಸ್ಥಾನದ ಡಿಟೆಕ್ಟಿವ್ಹರಲ್ಲಿ ಜಾಗ್ರತೆಯನ್ನುಂಟು ಮಾಡಬೇಕೆಂದೂ ನಾನು ಇಂಥ ಕೆಲಸವನ್ನು ಮಾಡಿರುವೆನು. ದುರುದ್ದೇಶದಿಂದ ಮಾಡಿದ ಯಾವುದೊಂದು ಕಾರ್ಯದ ಅಪರಾಧವೂ ಸಿದ್ಧವಾಗದ್ದರಿಂದ, ನಾನು ಅಪರಾಧಿಯಾಗಲಾರೆನು. ಒಂದು ವೇಳೆ ನಾನು ತಮಗೆ ಅಪರಾಧಿಯೆಂದು ಕಂಡುಬಂದರೂ, ನೀವು ನನ್ನನ್ನು ಕ್ಷಮಿಸಲು ಸಮರ್ಥರಿರುತ್ತೀರಿ. ನಾನು ಇಂದಿನ ವರೆಗೆ ಡಿಟೆಕ್ಟಿವ್ಹರಿಗೆ ಮುಂಗಡ ತಿಳಿಸಿಯೇ ಹಲವು ಕಳವುಗಳನ್ನು ಮಾಡಿರುವೆನು. ನಾನು ಕದ್ದ ಪದಾರ್ಥಗಳು ಇಲ್ಲಿಯೇ ಮೇಜಿನ ಮೇಲಿರಿಸಲ್ಪಟ್ಟಿವೆ.

ನಮ್ಮ ಸಂಸ್ಥಾನಿಕರು ಆಯಾ ಪದಾರ್ಥಗಳ ಮಾಲಕರನ್ನು ಕರೆದು ಅವರಿಗೆ ಕೊಡುವರು. ನನಗೆ ಯಾರೊಬ್ಬರ ಪದಾರ್ಥದ ಅಪೇಕ್ಷೆಯೂ ಇರುವದಿಲ್ಲ. ನನಗೆ ದೇವರು ಅಪಾರವಾದ ಸಂಪತ್ತಿಯನ್ನು ಕೊಟ್ಟಿರುವನೆಂಬುದು ನಿಮಗೆಲ್ಲರಿಗೂ ಗೊತ್ತಿದ್ದ ಸಂಗತಿಯೇ ಆಗಿದೆ. ಕೊನೆಗೆ ನಮ್ಮ ಡಿಟೆಕ್ಟಿವ್ಹ ಬಂಧುಗಳನ್ನು ಕುರಿತು ಕ್ಷಮಾಪಣೆ ಕೇಳಿಕೊಳ್ಳುವೆನು. ಪರ

ದಾರಸಿಂಗರಂತೂ ನನ್ನ ಸಲುವಾಗಿ ಬೇಸತ್ತು ಹೋಗಿರುವರು. ಅವರು ನನ್ನ ಮುಂದೆಯೇ ಹಲವು ಸಾರೆ ದುಃಖೋದ್ಗಾರಗಳನ್ನು ತೆಗೆದಿರುವರು. ಹೀಗೆ ಅಲ್ಪ ಕಾಲದ ವರೆಗೆ ಅವರಿಗೆ ತೊಂದರೆ ಕೊಟ್ಟದ್ದಕ್ಕಾಗಿ ಅವರು ದೊಡ್ಡ ಮನಸ್ಸಿನಿಂದ ನನ್ನನ್ನು ಕ್ಷಮಿಸುವರೆಂದು ನಂಬಿರುವೆನು. ಇದರಂತೆ ನನ್ನ ಸ್ನೇಹಿತರಾದ ಭವಾನರಾವ, ಬಾಬೂರಾವ ಇವರಾದರೂ ನನ್ನನ್ನು ಕ್ಷಮಿಸುವರೆಂದು ಆಶಿಸುವೆನು, ಎಂದು ನುಡಿದು, ತಾನು ಹೇಗೆ ಹೇಗೆ ಕಳವು ಮಾಡಿದೆನೆಂಬದನ್ನು ಸಂಕ್ಷಿಪ್ತವಾಗಿ ವರ್ಣಿಸಿದನು. ಅದನ್ನು ಕೇಳಿ ಎಲ್ಲ ಜನರಿಗೂ ಡಿಟೆಕ್ಟಿವ್ಹರಿಗೂ ತುಂಬಾ ಆಶ್ಚರ್ಯವಾಯಿತು. ಎಲ್ಲರೂ ಆತನ ಹಸ್ತಕೌಶಲ್ಯಕ್ಕೆ ಬೆರಗಾಗಿ, ಆತನ ಅಭಿನಂದನ ಮಾಡಿದರು. ಬಳಿಕ ಆ ತರುಣನು ಸಂಸ್ಥಾನಿಕರ ಬಳಿಗೆ ಹೋಗಿ ಕುಳಿತುಕೊಂಡನು.

ನಂತರ ಸಂಸ್ಥಾನಾಧಿಪತಿಗಳ ಅಪ್ಪಣೆಯ ಮೇರೆಗೆ ದಿವಾಣರು ಎದ್ದು ನಿಂತು ನುಡಿದರೇನಂದರೆ:—

ಸಭಿಕರೇ, ಈಗ ಮಾತಾಡಿದ ಈ ತರುಣನು ನಮ್ಮ ಸಂಸ್ಥಾನದಲ್ಲಿರುವ ಪೋಪಟಲಾಲನೆಂಬ ಶ್ರೀಮಂತನೆಂಬದನ್ನು ನೀವು ಬಲ್ಲಿರಷ್ಟೇ. ಈತನೇ ಇದುವರೆಗೆ ಬಹಾದ್ದರನೆಂಬ ಹೆಸರಿನಿಂದ ಕಳವು ಮಾಡಿದನು. ಈತನು ಕಳವು ಯಾಕೆ ಮಾಡಿದನೆಂಬದು ಇವನ ಭಾಷಣದಿಂದಲೇ ವಿದಿತವಾಗಿದೆ. ಈ ಕೆಲಸದಿಂದ ಈತನ ಬುದ್ಧಿವೈಭವವು ಶ್ರೀಮಂತ ಸರಕಾರದ ಲಕ್ಷ್ಯದಲ್ಲಿ ಚನ್ನಾಗಿ ಬಂದಿದೆ. ಈ ತರುಣನು ನಮ್ಮ ಸಂಸಾನದಲ್ಲಿಯ ಡಿಟೆಕ್ಟಿವ್ಹರಿಗೆ ಕಳ್ಳತನದ ಚೇಷ್ಟೆಯನ್ನು ತೋರಿಸುವದಕ್ಕಾಗಿಯೇ ಮಾಡಿರುವನು. ಈ ಚೇಷ್ಟೆಯಲ್ಲಿ ಇವನು ಸ್ವಾರ್ಥಕ್ಕೆ ಬಿದ್ದಿದ್ದರೆ, ಇವನು ಅಪರಾಧಿಯಾಗುತ್ತಿದ್ದನು. ಇವನು ಸರಳ ಮನಸ್ಸಿನಿಂದ ತನ್ನ ಉದ್ದೇಶವನ್ನೆಲ್ಲ ತಿಳಿಸಿ, ಪದಾರ್ಥಗಳನ್ನೆಲ್ಲ ಇದ್ದಕ್ಕಿದ್ದ ಹಾಗೆಯೇ ಸರಕಾರಕ್ಕೆ ಒಪ್ಪಿಸಿದ್ದರಿಂದ ಈತನು ನಿರಪರಾಧಿಯಾಗಿರುತ್ತಾನೆ; ಇಷ್ಟೇ ಅಲ್ಲ. ಇವನಂಥ ಮನುಷ್ಯನು ಸಿಗುವದೇ ದುರ್ಲಭವೆಂದು ಹೇಳಬಹುದು, ಈತನಲ್ಲಿರುವ ಶ್ರೇಷ್ಠ ಗುಣವನ್ನು ತಿಳಿದು, ಶ್ರೀಮಂತ ಸರಕಾರವು ಇವನಿಗೆ ತಮ್ಮ ಸಂಸ್ಥಾನದಲ್ಲಿ ಡಿಟೆಕ್ಟಿವ್ಹ ಇನಸ್ಪೆಕ್ಟರ ಜನರಲ್ಲನ ಅಧಿಕಾರವನ್ನು

ದಯಪಾಲಿಸಿರುತ್ತದೆ. ಸರಕಾರಕ್ಕೆ ಈ ಗುಣಗ್ರಾಹಕತೆಯು ಭೂಷಣ ವಾದದ್ದೇ ಸರಿ! ಪೋಪಟಲಾಲ ತರುಣನ ಚಾತುರ್ಯಕ್ಕೆ ಈ ಅಧಿ ಕಾರವು ತಕ್ಕ ಕಾಣಿಕೆಯಾಗಿರುವದು. ಈ ತರುಣನು ತನ್ನ ಬುದ್ಧಿ-ವೈಭವದಿಂದ ಸಂಸ್ಥಾನದೊಳಗಿನ ಕಳ್ಳರನ್ನೆಲ್ಲ ಶಿಕ್ಷಿಸಿ, ಪ್ರಜೆಗಳಿಗೆ ಸೌಖ್ಯ ಕೊಡುವನೆಂದು ಹಾರೈಸುವೆವು.

× × ×

ಸಭೆಯು ಮೋದಗೊಂಡಿತು. ಪ್ರತಿಯೊಬ್ಬರ ಮುಖಕಮಲಗಳು ಅರಳಿರವು. ಡಿಟೆಕ್ಟಿವ್ಹರೆಲ್ಲರೂ ಹರುಷಗೊಂಡರು. ಸಭೆಯಲ್ಲಿ ಅಸಮಾ ಧಾನವೇ ಆಗಿದ್ದರೆ, ನಿಜವಾದ ಕಳ್ಳರಿಗೆ ಮಾತ್ರ ಆಗಿರಬಹುದು. ಸಂಸ್ಥಾ ನಿಕರ ಹಸ್ತದಿಂದ ಅವರವರ ಪದಾರ್ಥಗಳು ಅವರವರಿಗೆ ಕೊಡಲ್ಪಟ್ಟವು. ಅವರೂ ಪೋಪಟಲಾಲನಿಗೆ ತಕ್ಕ ಹಣವನ್ನು ಕಾಣಿಕೆಯೆಂದು ಸಮರ್ಪಿಸಿ ದರು.

× × ×

ಶ್ರೀಮಂತನಾದ ಪೋಪಟಲಾಲನು ಡಿಟೆಕ್ಟಿವ್ಹ ಇನಸ್ಪೆಕ್ಟರ ಜನರಲ್ಲನ ಅಧಿಕಾರಪದಾರೂಢನಾದನು. ಸಂಸ್ಥಾನದ ಪ್ರಜೆಗಳು ಆತನ ಅದ್ಭುತ ಕಥಾನಕಗಳನ್ನು ಪ್ರೇಮದಿಂದ ಕೇಳತೊಡಗಿದರು.

---

